ಪ್ರಕಟನೆಯ ೨೮ ನೆಯ ವರ್ಷ : ೧೯೯೩

# ಸಂಕ್ರಮಣ

೨೩೦

---

ಕೆ. ಫಣಿರಾಜ, ಟಿ. ಆರ್. ಚಂದ್ರಶೇಖರ,
ಮೃತ್ಯುಂಜಯ ರುಮಾಲೆ, ಬಸವರಾಜ ಸಬರದ,
ಬಿ. ಎಸ್. ದುಂಡರಡ್ಡಿ
ಶರಣ ಚಳುವಳಿಯ ನಿಜ ಸ್ವರೂಪ : ಚರ್ಚೆ

ವಾಮನ ನಂದಾವರ
ಬಿ. ವ್ಹಿ. ಶಿರೂರ ಅವರ
'ಸಂಶೋಧನ ಸ್ವರೂಪ'

ಧರಣೇಂದ್ರ ಕುರಕುರಿ, ನಿತಿನ್ ಮೆಹತಾ, ಸಿತಾಂಶು ಯಶಶ್ಚಂದ್ರ, ಕೆ. ಎಂ. ರವಿಶಂಕರ, ಎಂ. ಡಿ. ವಕ್ಕುಂದ, ಅಶೋಕ ಮಠದ, ಹಮೀದ್ ಮಂಜೇಶ್ವರ, ಎಸ್. ಸಿ. ಸದಾಶಿವ, ಎ. ಪ್ರಭಾಕರ ಹೆಗ್ಡೆ, ಶೈಲಜಾ ಪುದುಕೋಳಿ, ಎಂ. ಲೋಕೇಶ, ಬಸವರಾಜ ಸಾದರ, ಶಿವಾನಂದ ಚಿತ್ರಗಾರ, ಪ್ರಕಾಶ್ ಆರ್. ಕಮ್ಮಾರ ಅವರ ಕವನಗಳು

---

ಸಂಪುಟ ೨೮: ಸಂಚಿಕೆ ೬ ಜೂನ ೧೯೯೩

# ಸಂಕ್ರಮಣ

ಜೂನ ೧೯೯೩

ಸಂಪುಟ ೨೮ : ಸಂಚಿಕೆ ೬

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ



**SANKRAMANA 250**
A Monthly in Kannada
June 1993 Vol. XXVIII No. 6
Sankramana Prakashana Dharwad-580 001 Phone : 40509
Printed at Chandana Mudrana, Dharwad 8 Phone : 44863
Annual Subscription : Rs. 50/-

# ಧರಣೇಂದ್ರ ಕುರಕುರಿ

## ಆರು ಕವನಗಳು*

### ೧ ಯವ್ವಾ ಭಾರತೀ

ಯವ್ವಾ ಭಾರತೀ
ನನಗ ದಿಗಲಾಗೇತಿ,
ನೀ ಹ್ಯಾಂಗಾರs ತಡಕೋತಿ ?

ತಲಿಗೊಂದ ಜಾತಿ
ಕಲ್ಲಿಗೊಂದೊಂದ ದೇವರಾ ಮಾಡಿ
ಗುದ್ಯಾಡೋ ಮಕ್ಕಳಾ
ಮಡಲಾಗಿಟಗೊಂಡ
ಹ್ಯಾಂಗರs ಮುದ್ದಾಡತಿ ?
ಖಬರಗೆಟ್ಟ ಕನಸ ಕಾಣಕೊಂತ
ಮಲಗಿದ ರಿಣಗೇಡಿ ಮಕ್ಕಳನ
ಎಬ್ಬಿಸೇನಂತಿ.
ಬಾಳೇಕ ಹಚ್ಚೇನಂತಿ.

ತಮ್ಮ-ತಮ್ಮ ತಿಟಮಾಟದಾಗ
ತಾಯೀ ಹೊಟ್ಟೇನs ಕೋದು
ಹಂಚಿಕೊಳ್ಳೋ ಈ ಮಕ್ಕಳಿಗೆ
ಕಟಗೀ ಹೊರೀ
ತರಿಸಿ, ಮುರಿಯಾಕಹಚ್ಚಿ ಒಕ್ಕಟ್ಟಿನ
ಕಥಿ ಹೇಳಿದ ಮುದುಕನ
ಉದಾಹರಣೆ ಕೊಟ್ಟೇನಂತಿ.
ದಾರಿಗೆ ಹಚ್ಚೇನಂತಿ.

ನಿನ್ನ ತೇರಿನ ಗಾಲೀ
ಕುರುಡ ನಂಬಿಕೀ ಕೆಸರಾಗ

---

* ನಾ ಕವಿ ಅಲ್ಲಾ (೧೯೬೨) ಕವನ ಸಂಕಲನದಿಂದ

ಹೂಗದೇವಿ,
ಇಷ್ಟಾದರೂ ಯವ್ವಾ
ನಮ್ಮನ್ನ ಅವಚಿಕೊಂಡೇನಂತಿ.
ಪ್ರೀತೀ
ಸುರುದು ಸಲುವೇನಂತಿ, ಬೆಳಸೇನಂತಿ
ನಿಂದೂ ರಗಡಽ ಕುವ್ವತ್ತು.
ಮಕ್ಕಳ ಕಾಲಾಗ ಗುಂದಮುರಗಿ
ಹಾಕೀ ಹಾಕತಿ.
ನಿನಗ ನಾವು ಹೊರೀ ಚಿಂತಿ.

ಏನಽ ಆದರೂ ಯವ್ವಾ
ನಾವೆಲ್ಲಾರೂ ನಿನ್ನ ಮಕ್ಕಳಽ
ಅನ್ನೂದ ಸುಳ್ಳ ಆದೀತ ?
ಅದಕಽ ನಮ್ಮ ತಪ್ಪ ಮನ್ನಸ ತಾಯೀ
ಅಂದರ ಯಾಕ ಸುಮಾಕ ಕುಂತೀ ?

## ೨ ನಡೆದ ಬಂದ ದಾರಿ

ಇಲ್ಲೀ ತಂಕ
ನಾ
ನಡದ ಬಂದ ದಾರಿ,
ಕಂಡ ನಾಡು-ಕಾಡು
ನನ್ನ ಕೂಡಽ ನಡದಾವ.
ನಾ ತುಳದ ಮುಳ್ಳು
ಎಡವಿದ ಕಲ್ಲು
ಜರ್ರನ ಜಾರಿದ ಜಾರಿಕಿ
ನಾನೇರಿದ ಏರಿ
ಇಳದ ಇಳಕಲ
ಬಿದ್ದ ಕೊನಕರ
ಕುಂತ ಕುರ್ಚಿ
ಖುರ್ಚಿಯೊಳಗಿನ ಬರ್ಚಿ

ಈ ಯಾವೂ ನನ್ನ
ಬೆನ್ನ ಬಿಟ್ಟಿಲ್ಲ.
ನಾನೂ
ಅವುಗಳ ಗೆಳೆತನ ಬಿಟ್ಟಿಲ್ಲ.
ಅವು ಎಲ್ಲಾ ಸೇರಿ
ನನ್ನ ಕೈ ಹಿಡಿದು ಕಾಳಜಿಯಿಂದ
ಕರಕೊಂಡು ಹೊಂಟಾವ
ಪ್ರಯಾಣ ಸುಖರೂಪ ಮಾಡ್ಯಾವ.
ಅಂಥ ವ್ಯಾಗ
ಮುಂದಕ ಹೆಜ್ಜೀ
ಇಡೋದಕ್ಕ ನನಗ
ಯಾಕ ಅಂಜಿಕಿ ?

## ೩ ಹುರುಪಿಗೆದ್ದ ಶಬ್ದ

ನಮ್ಮೂರೊಳಗ
ಉರವಡಿ ಹೊಡದ ದನದಂಗ
ಎಲ್ಲಿ ಬೇಕಲ್ಲಿ ಓಡಾಡೋ
ಶಬ್ದ ಎಲ್ಲಾ ಹಿಡಕೊಂಡ ಬಂದು
ಚೆಂದಾಗಿ ಹೊಂದಿಸಿ
ಕವಿತಾ
ಮಾಡಿದೆ.
ಅವುಗಳ ಮ್ಯಾಲೆ ಒತ್ತಿ-ಒತ್ತಿ
ಅರ್ಥ ಹೇರಿದೆ.
ಒಂದಷ್ಟ ಶಬ್ದ
ಹಿಗ್ಗಿನಿಂದ ಕುಣದಾಡಿ ಅರ್ಥದ
ಒಜ್ಜೆ ಹೊತಗೊಂಡು
ಮುಂದಕ ನುಗ್ಗಿದವು.
ಆ ಒಜ್ಜೆ ತಾಳಲಾರದ
ಒಂದಷ್ಟ ಶಬ್ದ

ಬೆನ್ನ ಬಗ್ಗಿದಾಗ
ಇವನೌನ ಅಂತ
ಅರ್ಥ ಒಗದು
ಓಡಿ ಹೋಗಿ
ಮತ್ತ ನಮ್ಮೂರ
ತುರಮುಂದ್ಯಾಗ ಹಿರಗ್ಯಾಡಾಕ ಹತ್ತಿದವು.
ನಾನೂ
ಹಟಕ್ಕ ಬಿದ್ದು
ಶಬ್ದದ ಬೆನ್ನ ಹತ್ತಿ
ಹೆಡಮುರಗಿ ಕಟ್ಟಿ
ಮತ್ತ ಹಿಡಕೊಂಡ ಬಂದೆ.
ತಿಣಕ್ಯಾಡಿ ತರಬೇತಿ ಕೊಟ್ಟು
ತಯಾರ ಮಾಡಿದೆ.
ಈಗ
ಹುರುಪಿಗೆದ್ದ ಶಬ್ದ
ನಾ ಹೇರಿದ ಅರ್ಥದ ಒಜ್ಜೆ
ಹೊತ್ತಗೊಂಡು
ಸಾದ ಆದ ಎತ್ತಿನಂಗ
ಹಾರಿಕಿ ಬಿದ್ದು
ಓಡಾಕ ಹತ್ಯಾವ,

## ೪ ಸಂಬಂಧ

ಕಣ್ಣು
ಮುಚ್ಚಿದರ
ಕತ್ತಲ.
ತೆರದರ
ಬೆಳಕು.
ಆದs

ಜಗತ್ತಿನ ಕೂಡ
ನಮ್ಮ
ಸಂಬಂಧ.

## ೫  ಬೀದಿಗಳೆಲ್ಲ ಕಳುವು ಆಗ್ಯಾವೋ

ಕೊಳ್ಳೀ ದೆವ್ವ ಮೊಳ್ಳ ಮಾಡಿ
ಧೂಳಾ ಎಬ್ಬಿಸ್ಯಾವೋ
ಧೂಳದೊಳಗs ಬೀದೀ ಎಲ್ಲ
ಕೊಳ್ಳೀ ಹೊಡೆದಾವೋ ॥

ಹಳ್ಳಿಯೊಳಗಿನ ಬೀದೀ ಎಲ್ಲ
ಹಗಲs ಕದ್ದಾವೋ
ಕಳವಿನ ಗೋಳು ಹೇಳಾಕ ಹೋದರ
ಉಳಿಸ್ಯಾಡಿ ಹೊಡದಾವೋ॥

ಕತ್ತಲದೊಳಗ ಬತ್ತಲ ಜನರ
ಮನಸೆಲ್ಲ ಅತ್ತಾವೋ
ಸುತ್ತ-ಮುತ್ತ ಎತ್ತ ಹೋದರೂ
ಕನಸೆಲ್ಲ ಸತ್ತಾವೋ॥

ಹಾದಿ ಸಿಗದ ಕಾಲಾಡಿಸಗೊಂತ
ಗರಬಡಿಸಿ ಹುಡಿಕ್ಯಾರೋ
ಅಂತೂ-ಇಂತೂ ಹಲಬಕೊಂತ
ಹಿಲಾಲ ಹಚ್ಯಾರೋ ॥

ಹಿಲಾಲಿಗಂಜಿ ಕೊಳ್ಳೀ-ದೆವ್ವ
ದಿಲ್ಲೀ ಸೇರ್ಯಾವೋ
ದಿಲ್ಲಿಯೊಳಗಿನ ಬೀದೀ ಎಲ್ಲ
ಗಿಜಬುಳಕಿ ಮಾಡ್ಯಾವೋ॥

ಬಂದರ ಬಾರಲೆ ಕೊಳ್ಳೀ ದೆವ್ವ
ಆನಕೊಂತ ಕುಂತಾರೋ
ಹಳ್ಳೀ ಸುತ್ತ ಹಿಲಾಲ ಹಚ್ಚಿ
ನಿದ್ದೀ ಹೊಡದಾರೋ ॥

ಹಿಲಾಲ ಆರಿಸಿ ಕತ್ತಲಾ ಮಾಡಿ
ಮೆಲ್ಲಕ ಹೊಕ್ಕ್ಯಾವೋ
ಹಳೀ ದರಬಾರ ಹಳ್ಳಿಯೊಳಗ
ಬೆಳತನಕ ನಡಿಸ್ಯಾವೋ ॥

## ೬ ದಾರಿ

ನಿಲ್ಲೋದು ಸೋಲು
ನಡಿಯೋದು ಗೆಲುವು
ಗುರಿ ಹಿಡದು ನಡೀಸಬೇಕ
ಮುಂದಕ ।

ಕಲ್ಲು-ಮುಳ್ಳಿಲ್ಲ
ಬಿಡತಾವೋ ದಾರಿ
ಹೆಜ್ಜೀ ಇಟ್ಟರ ನಗು-ನಗುತ
ಮೆಲ್ಲಕ॥

# ಗುಜರಾತಿ ಕವನಗಳು

## ೧ ರೈಲು

ರೈಲಿನ ಬಗ್ಗೆ ಇಷ್ಟಂತು ಖರೆ
ಅದು ನಮ್ಮ ಬಗ್ಗೆ ಎಂದೂ ಚಿಂತಿ ಮಾಡೂದಿಲ್ಲ.
ಯಾರs ಬರ್‍ಲಿ, ಯಾರs ಹೋಗ್ಲಿ,
ಬಾಗಿಲದಾಗ ನಿಲ್ಲಲಿ,
ಕಿಡಕಿ ಹತ್ತಿರ ಕೂಡಲಿ,
ಕೆಮ್ಮಲಿ, ಬೇಕಾದರ ಶೇಂಗಾ ತಿನ್ನಲಿ.
ಇಲ್ಲಂದರ ಜೋಲಿ ಹೊಡೀಲಿ
ಇಲ್ಲ ಲೈನ ಹೊಡೀಲಿ,
ಬೈಯಲಿ, ಬೇಕಾದರ ಕಿಸೇ ಹೊಡೀಲಿ
ಆದರ ರೈಲಿಗೇನು ?
ಎಲ್ಲಿ ನೆನಪು ಇಲ್ಲೊ ಅಲ್ಲಿ ಸುಖ, ದುಃಖಾ ಇಲ್ಲ.
ಈ ಸತ್ಯದ
ಹೆಸರೇ ರೈಲು.

ಕವಿ : ನಿತಿನ್ ಮೆಹತಾ

## ೨ ರೈಲು

ತಂಗಿಗೆ ಹೇಳಿದ್ದೆ
ಹನ್ನೊಂದಕ್ಕೆ ಬರತೀನಂತ.
ಆದರ ರೈಲು ತಪ್ಪಿತು.
ತಂಗಿ ಶೆಟಗೊಂಡಳು.
ಏನು ಮಾಡಲಿ ?
ಯಾರಿಗೆ ಹೇಳಲಿ ?
ರೈಲು ಐತಲ್ಲ.

ಕವಿ : ನಿತಿನ್ ಮೆಹತಾ

## ೩ ಸಮುದ್ರ

ದೇವ ದಾನವರು ಸರಳಗೊಳಿಸುವುದಕ್ಕಿಂತ
ಮೊದಲಿನ ಸಮುದ್ರವನ್ನು
ನಾನು ಕಂಡಿದ್ದೇನೆ.
ಬಡವಾನಲನದ ಬೆಳಕಿನೊಳಗಿನ ನೀರನ್ನು
ನಾನು ಕಂಡಿದ್ದೇನೆ.
ತೇವ ಬೆಂಕಿಗಳನ್ನು ಬೇರೆ ಮಾಡಲಾಗುವುದಿಲ್ಲ.
ತೋಯುವುದು ಸುಡುವುದೂ ಎರಡೂ ಒಂದೇ.
ಸಾಗರದ ಅಡಿಯಿಂದ ನಾ ಆಚೆ ಬಂದಾಗ
ನನ್ನ ಮುಷ್ಟಿಯಲ್ಲಿ ಮುತ್ತುಗಳಿರುವುದಿಲ್ಲ.

ನಾನು ಮುಳುಗನಲ್ಲ
ನಾನು ಕವಿ
ಏನು ಇದೆ, ಅದು ಇದೆ, ನನ್ನ ಕಣ್ಣುಗಳಲ್ಲಿ.

ಕವಿ : ಸಿತಾಂಶು ಹರಿಶ್ಚಂದ್ರ
ಅನು : ತೇಜಸ್ವಿ ಕಟ್ಟೀಮನಿ

ಕೆ. ಮು. ರವಿಶಂಕರ

---

## ಆಶಯ

ಜಗತ್ತಿನೆಲ್ಲ
ಚಾಕು-ಚೂರಿಗಳು
ಮೊಂಡಾಗಲಿ.

ರಸ್ತೆಗಳು
ನೆತ್ತರ ಕಲೆಗಳಿಂದ
ಕೆಂಪಾಗದಿರಲಿ.

# 'ಶರಣ ಚಳುವಳಿಯ ನಿಜ ಸ್ವರೂಪ'

## ಪ್ರತಿಕ್ರಿಯೆ: ಒಂದು

"NEVER GO FORWARD WITHOUT GOING
BACK FIRST TO CHECK THE DIRECTION.
THOSE WHO ASK QUESTIONS ARE THOSE
WHOM YOU WILL ANSWER, BUT
THOSE WHO WILL LISTEN TO YOU ARE
THOSE WHO THEN ASK YOU"

—BRECHT

ಕಳೆದ ದಶಕದ ಕುದುರೆಮೋತಿ ಸ್ವಾಮಿ ಪ್ರಕರಣ, ಕೆಲವೇ ದಿನಗಳ ಹಿಂದಿನ ಬದನವಾಳದ ಘಟನೆ, ವೀರಶೈವ ಮಠಾಧೀಶರು 'ಸಂಘ ಪರಿವಾರ'ದೊಡನೆ ಬೆಳೆಸಿರುವ ನಂಟು, ಈ ಎಲ್ಲ ಪ್ರಸ್ತುತ ಬೆಳವಣಿಗೆಗಳ ಹಿನ್ನೆಲೆಯಲ್ಲಿ 'ಶರಣ ಚಳುವಳಿಯ' ಸ್ವರೂಪದ ಬಗ್ಗೆ, ಅದು ಪಡೆದಿರುವ ರೂಪದ ಬಗ್ಗೆ ವಿಮರ್ಶಾತ್ಮಕ ಪರಿಶೀಲನೆಯ ತುರ್ತು ಸಹಜವಾದದ್ದೇ. ಈ ನಿಟ್ಟಿನಲ್ಲಿ ಎಸ್. ಎಸ್. ಹಿರೇಮಠರು ಪ್ರಾರಂಭಿಸಿರುವ ಚರ್ಚೆಯನ್ನು ಮುಂದುವರಿಸಬೇಕಾದದ್ದು ಅಷ್ಟೇ ತುರ್ತಾದುದು ಎಂದು ಭಾವಿಸಿದ್ದೇನೆ ['ಶರಣ ಚಳುವಳಿಯ ನಿಜಸ್ವರೂಪ.' ಸಂಕ್ರಮಣ ೨೪೨] ಇದರೊಟ್ಟಿಗೆ ಪ್ರಸ್ತುತ ಲೇಖನಕ್ಕೆ ಪ್ರತಿಕ್ರಿಯಿಸುತ್ತಿರುವುದು ಎರಡು ಸಹಕಾರಣಗಳಿಗಾಗಿ:

೧ ಕೋಮುವಾದ ಅತ್ಯಂತ ಕ್ರೂರ ರೂಪಕ್ಕೆ ಬೆಳೆಯುತ್ತಿರುವಾಗ, ಇಂತಹ ಪ್ರಶ್ನೆಗಳ ಬಗ್ಗೆ ತೀರಾ ಅಸಡ್ಡೆ ಅಥವ ನಿರ್ಲಿಪ್ತ ಗೌರವ ತೋರುವುದು ಅಪಾಯಕರ.

೨ ಲೇಖನದಲ್ಲಿ ಮಾಡಿರುವ ಯೋಚನ ವಿಧಾನ, ಉದಾರವಾಗಿ ಮನ್ನಣೆಗಳಿಸು ತ್ತಿರುವುದರಿಂದ, ಈ ವಿಧಾನದ ಒಳ ಹೊರಗುಗಳ ಬಗ್ಗೆ ಚರ್ಚಿಸಲು.

ಶರಣ ಚಳುವಳಿಯನ್ನು ಬಹುಪಾಲು ಚಿಂತಕರು 'ರಮ್ಯಾತ್ಮಕ' (Romantic) ವಾದ ನೆಲೆಯಿಂದ ಗ್ರಹಿಸಿರುವ ಹಿನ್ನೆಲೆಯಲ್ಲಿ, ಹಿರೇಮಠರ ಲೇಖನ ಭಿನ್ನವಾಗಿ ಕಾಣಬಹುದು. 'ಇತ್ಯಾತ್ಮಕ' ಮೂಲದಿಂದ ಪ್ರೇರಿತರಾದವರಿಗಿಂತ ಭಿನ್ನವಾಗಿ ಚಳುವಳಿಯ 'ನೇತ್ಯಾತ್ಮಕ ಸಂಗತಿಗಳತ್ತ ಗಮನ ಹರಿಸುವ' ಹಿರೇಮಠರ 'ಚಿಂತನ ಕ್ರಮ' ಬರವಸೆದಾಯಕವಾಗಿರಬಹುದೆಂದು, ಒಂದೇ ಒಂದು ಹೆಜ್ಜೆ ಮುಂದಿಟ್ಟೊಡನೆ, 'ಇತ್ಯಾತ್ಮಕ' ಮೂಲದಿಂದ ಪ್ರೇರಿತರಾದವರು ಸವೆಸದೇ ಬಿಟ್ಟ, ಇನ್ನರ್ಧ ವೃತ್ತವನ್ನು ಸುತ್ತಿ, ಅದೇ ಮೂಲವನ್ನು ಸೇರುತ್ತದೆ; 'ಕನ್ನಡ ಸಂಸ್ಕೃತಿಯ ಪಾಶ್ರ್ವಿಕ ವ್ಯಾಖ್ಯಾನ'ದ ಅಪಾಯವನ್ನು ಅರಿತರೂ ಹಿರೇಮಠರು, ಆ ಅಪಾಯ ವನ್ನು ಮೀರಬಲ್ಲಂತಹ 'ಚಿಂತನಕ್ರಮ'ದ ಮಹತ್ವವನ್ನು ಮನಗಾಣದಿರುವುದಷ್ಟೇ ಅಲ್ಲ, ತಾವು ಅನುಸರಿಸುವ ವಿಧಾನ 'ಸಂಸ್ಕೃತಿಯ ವ್ಯಾಖ್ಯಾನ'ವನ್ನು ಮತ್ತಷ್ಟು 'ಪಾಶ್ರ್ವಿಕ' ಹಾಗು ಸಂಕುಚಿತಗೊಳಿಸುತ್ತಾರೆ. ಆಶ್ಚರ್ಯವೆನಿಸಿದರೂ ಗೋಚರವಾಗುವ ಅಂಶವೆಂದರೆ: ಯಾರಿಂದ ಹಿರೇಮಠರು ಭಿನ್ನರಾಗಬಯಸುತ್ತಾರೋ, ಅವರ 'ಚಿಂತನೆ'ಗಳ ಮೂಲ ಸಿದ್ಧಾಂತವನ್ನೇ, ಇವರು ಆಶ್ರಯಿಸುತ್ತಾರೆ.

ಹಾಗಿದ್ದರೇ, ಈ ಸಾಮಾನ್ಯ 'ಸಿದ್ಧಾಂತ ಮೂಲ' ಯಾವುದು ? ನನ್ನ ಪ್ರಕಾರ ಅದು: ೧. 'ಶರಣ ಚಳುವಳಿ'ಯನ್ನು 'ಸಂಪೂರ್ಣ ವಿಷಯಾತ್ಮಕವಾಗಿ' ಗ್ರಹಿಸು ವುದು ೨. ಚಳುವಳಿಯ ಪರಿಣಾಮವನ್ನು 'ಉದ್ದೇಶಿತ ನಿರ್ಧಾರತ್ವ' (Objective determinism) ಎಂದು ಗ್ರಹಿಸುವುದು.

ಈ ರೀತಿಯ ಸೈದ್ಧಾಂತಿಕ ಚಿಂತನೆಯ ಪ್ರಕಾರ:

೧ ಶರಣ ಚಳುವಳಿ ಉಪಖಂಡದ ಇತಿಹಾಸದ ಯಾವ ಕಾಲಘಟ್ಟದಲ್ಲಾದರೂ ಘಟಿಸಬಹುದಿತ್ತು; ಯಾವಾಗ ಘಟಿಸಿದ್ದರೂ ಅದರ ಸ್ವರೂಪದಲ್ಲಿ, ಪರಿಣಾಮದಲ್ಲಿ ಮತ್ತು ನಾವು ಅದನ್ನು ಗ್ರಹಿಸುವರೀತಿಯಲ್ಲಿ ಯಾವ ಬದಲಾವಣೆಯೂ ಆಗು ತ್ತಿರಲಿಲ್ಲ.

೨ 'ಶರಣ ಚಳುವಳಿ'ಯ ಶಕ್ತಿ/ದೌರ್ಬಲ್ಯ, ಸೋಲು/ಗೆಲುವು, ಬಸವಾದಿ ನೇತಾ ರರ ಧನಾತ್ಮಕ/ಋಣಾತ್ಮಕ ಚಿಂತನೆ/ಕಾರ್ಯಚರಣೆಯ ಮೇಲಷ್ಟೇ ಅವಲಂಬಿತವಾ ಗಿತ್ತು; ನಾವಿಂದು ಋಣಾತ್ಮಕ/ಧನಾತ್ಮಕ ಎಂದೇನು ಗುರುತಿಸುತ್ತೇವೋ, ಅದಕ್ಕೆ ವಿರುದ್ಧವಾಗಿ, ಸ್ಪಷ್ಟವಾಗಿ ಚಿಂತಿಸುವ ಸ್ಥಾನದಲ್ಲಿ ಚಳುವಳಿಯ ನೇತಾರರಿದ್ದರು; 'ಉದ್ದೇಶ ನಿರ್ಧರಿತ'ವಾಗಿಯೇ ಚಳುವಳಿ ಪ್ರಾರಂಭವಾಯ್ತು; 'ಉದ್ದೇಶ ನಿರ್ಧಾರ'

'ಇದು' ಅಥವ 'ಅದು' ಎರಡೇ ಆಗಬಹುದಿತ್ತು; ಒಂದನ್ನು ನಿರಾಕರಿಸಿ, ಉಳಿದೊಂದನ್ನು ಅವರು ಹಿಡಿದುಕೊಂಡದ್ದೇ ಚಳುವಳಿ ನಾವು ಹೇಳಿದ ಸ್ವರೂಪ ಪಡೆಯಿತು.

೩. ಬಸವಣ್ಣ [ಅಥವ ಹರಳಯ್ಯ/ಮಧುವರಸ/ಮಾಚಿದೇವರು...] ಎಂಬ ವ್ಯಕ್ತಿಯೇ ಇಲ್ಲದಿದ್ದರೆ, ಆತನ ಪೂರ್ವಾಶ್ರಮ ಬ್ರಾಹ್ಮಣ (ಅಥವ ಶೂದ್ರ)ವಾಗಿರದಿದ್ದರೆ, ಚಳುವಳಿಯ ಸ್ವರೂಪ ಹ್ಯಾಗಿರುತ್ತಿತ್ತು, ಎಂಬ ಪ್ರಶ್ನೆಯೇ ಬರುವುದಿಲ್ಲ; ಯಾಕೆಂದರೆ ಈ 'ವಿಷಯಾತ್ಮಕ' ರೂಪಗಳ (Subjective form) ಅನುಪಸ್ಥಿತಿಯಲ್ಲಿ ಚಳುವಳಿಗೆ ಅರ್ಥವೇ ಇರುವುದಿಲ್ಲ.

[ಈ ಮೂರು ಅಂಶಗಳನ್ನು ಸೂತ್ರರೂಪದಲ್ಲಲ್ಲದೇ, ಒಟ್ಟು ಗ್ರಹಿಕೆಯನ್ನು ಸಮೀಕರಿಸಿ ಕೊಟ್ಟಿದ್ದೇನೆ].

ಮುಖ್ಯವಾದ ಪ್ರಶ್ನೆಯನ್ನೇ ನೋಡೋಣ. 'ವೀರಶೈವ ಸಮಾಜ' (ಅದು ಕೂಡ ಏಕತ್ರವಾದುದಲ್ಲ ಎಂಬ ಗ್ರಹಿಕೆ ಕೂಡ ತುಂಬ ಮುಖ್ಯ) ಯಾಕೆ ಇಷ್ಟು 'ಪ್ರತಿಗಾಮಿ' ಪಥದಲ್ಲಿದೆ ? 'ಇತ್ಯಾತ್ಮಕ ಮೂಲದಿಂದ ಗ್ರಹಿಸಂತ್ತಾರೆ' ಎನ್ನುವವರು ಹೀಗೇ ಉತ್ತರಿಸಬಹುದು; ಬಸವಣ್ಣನಂತಹ ಧೀಮಂತ ಆತ್ಮಗಳು ಇಂದು ವೀರಶೈವ ಸಮಾಜದಲ್ಲಿ ಇರದೇ ಇರುವುದು. ಹಿರೇಮಠರ ಗ್ರಹಿಕೆಯ ಪ್ರಕಾರ; ಬಸವಣ್ಣನ ಋಣಾತ್ಮಕ' ಚಿಂತನೆಯೇ ಇದಕ್ಕೆ ಕಾರಣ (ಯಾವುದು ಋಣಾತ್ಮಕ, ಯಾವುದು ಧನಾತ್ಮಕ ಎಂಬುದು ಪೂರ್ವನಿರ್ಧಾರಿತವಾಗಿತ್ತು). ಮೊದಲನೆಯದರ ಪ್ರಕಾರ ಚಳುವಳಿಯ ನಂತರದ ಕಾಲ-ದೇಶಗಳಲ್ಲಾದ ಬದಲಾವಣೆಗೂ 'ವೀರಶೈವ ಸಮಾಜಕ್ಕೂ' ಯಾವ ಸಂಬಂಧವೂ ಇಲ್ಲ. ಹಿರೇಮಠರ ಪ್ರಕಾರ, ಚಳುವಳಿಯ ಚಿಂತನೆ, ಕಾಲ-ದೇಶಗಳನ್ನು ಮೀರಿ 'ಮೂಲ ಪ್ರಭಾವ' ವನ್ನು ಉಳಿಸಿಕೊಂಡಿದೆ; ಒಂದು ವೇಳೆ ಚಳುವಳಿ ಧನಾತ್ಮಕ ನೆಲೆ ತಳೆದಿದ್ದರೆ, ಅದು ಇವತ್ತಿಗೂ ಅಂತಸ್ಸತ್ವದಲ್ಲಿ ಸ್ಥಾಯಿಯಾಗುಳಿದು. ಇಂದಿನ 'ಶೈವ ಸಮಾಜದ' ಸ್ವರೂಪ ಗುಣಾತ್ಮಕವಾಗಿ ಬೇರೆಯಾಗಿರುತ್ತಿತ್ತು.

ಎರಡೂ ಉತ್ತರಗಳಲ್ಲೂ ಕಾಲ-ದೇಶ ತೀರಾ ಪಾರದರ್ಶಕವಾದದ್ದು; ಚಿಂತನೆಗಳು ಯಾವ ಗತಿ ಬದಲಾವಣೆಗಳಿಲ್ಲದೇ ಅವುಗಳ ಮೂಲಕ ಹಾಯಬಲ್ಲುದು. ಇಲ್ಲಿ ತೀರಾ ಅಸಡ್ಡೆಗೊಳಗಾಗಿರುವುದು 'ಚಿಂತನೆ'ಯ ಮೇಲೆ ಕಾಲ-ದೇಶಗಳ ಪ್ರಭಾವ ಮತ್ತು ಅದರ ಸ್ವರೂಪ 'ಸಾಪೇಕ್ಷತೆ'. ಹಿರೇಮಠರ ವಾದಕ್ಕಷ್ಟೇ ನನ್ನನ್ನು ಸೀಮಿತಗೊಳಿಸಿಕೊಂಡು, 'ಶರಣ ಚಳುವಳಿಯ ನಿಜಸ್ವರೂಪ' ತೋರಿಸಲು ಅವರು ಬಳಸಿಕೊಂಡಿರುವ ಎರಡು ನೆಲೆಗಳು, ಮೇಲೆ ವಿಶದಪಡಿಸಿರುವ 'ಚಿಂತನ ವಿಧಾನ'ಕ್ಕೆ ಬದ್ಧವಾಗಿವೆ ಎಂದು ವಿವರಿಸುತ್ತೇನೆ.

## ದಲಿತ ವಿರೋಧಿ ಕ್ರಮ :

೧೨ ನೇ ಶತಮಾನವೆಂದು ಗ್ರಹಿಸಲಾಗಿರುವ 'ಶರಣ ಚಳುವಳಿ'ಯ ಮೂಲವನ್ನು ಅರಿಯಲು ನಮಗಿರುವ ಆಧಾರ ವಚನಗಳು ಮತ್ತು ವಿರಳವಾದ ಶಾಸನಗಳು; ಖಚಿತ ಲಿಖಿತ ಇತಿಹಾಸದ ಕೊರತೆಯಿರುವಾಗ, ಸಾಹಿತ್ಯಿಕ ಮೂಲಗಳಿಂದ ಒಂದು ಚಳುವಳಿಯ, ಚಿಂತನೆಯ-ರೂಪವನ್ನು ಮರುಕಟ್ಟುವುದು ಎಷ್ಟು ದುರ್ಗಮ ಎಂದು ಬೇರೆ ವಿವರಿಸಬೇಕಿಲ್ಲ. ಅದು ಕತ್ತಿಯ ಮೊನೆಯ ಮೇಲೆ ನಡೆದಂತೆ; ಒಂದಿಷ್ಟು ಆಯ ತಪ್ಪಿದರೂ, ಮಾಡುವ ಪರಿಣಾಮ ಭೀಕರವಾಗಿರುತ್ತದೆ. ಇಂತಹುದರಲ್ಲಿ ವಚನಗಳ 'ವಾಚ್ಯಾರ್ಥ'ಗಳ ಮೂಲಕ, ನಿರ್ಧಾರಗಳನ್ನು ತಳೆಯುವುದು ಅಪಾಯಕರವಾದುದು ಎಂದು ಹಿರೇಮಠರಿಗೆ ಅನಿಸುವುದಿಲ್ಲವೇ? ವಚನಗಳಿಗೆ ತಮ್ಮದೇ ಆದ 'ಧ್ವನ್ಯಾರ್ಥ'ವು ಇದೆ ಎಂಬುದನ್ನು ನಾವು ಗ್ರಹಿಸದಿದ್ದರೇ ಹೇಗೆ? (ಹಾಗೆಂದ ತಕ್ಷಣ 'ವಚನಗಳ ಧ್ವನಿ ಸಾರ್ವಕಾಲಿಕ'ವೆಂದೇನೂ ಅಲ್ಲ.) ಮತ್ತು 'ಧ್ವನಿ' ವಿಶ್ಲೇಷಣೆಕೂಡ, ಆ ಕಾಲ-ಸಮಾಜದ ಚೌಕಟ್ಟಿನೊಳಗೆ ನಡೆಯಬೇಕೇ ವಿನಹ, ಆಧುನಿಕವಾದದ್ದನ್ನು ಹೋಲಿಸುವುದು ಅವೈಜ್ಞಾನಿಕ.

೨೦ನೇ ಶತಮಾನದ ಕೊನೆಯ ಭಾಗದಲ್ಲಿ ಯಾವುದನ್ನು 'ದಲಿತ ವಿರೋಧಿ' ಎಂದು ವ್ಯಾಖ್ಯಾನಿಸಲಾಗುತ್ತದೋ, ಅದನ್ನು ೧೨ನೇ ಶತಮಾನದ ಶರಣ ನೇತಾರರ ಮೇಲೆ ಹಿರೇಮಠರು ಆರೋಪಿಸುತ್ತಾರೆ. ಇವತ್ತು ನಾವು ಎಷ್ಟು ಸೂಕ್ಷ್ಮವಾಗಿ ಗ್ರಹಿಸುತ್ತೇವೆಯೋ, ಅಷ್ಟೇ ಸೂಕ್ಷ್ಮಮಟ್ಟದಲ್ಲಿ ಬಸವಣ್ಣನೂ ಗ್ರಹಿಸಬಹುದಿತ್ತೆಂಬ ನಂಬುಗೆಯಿಂದ ತಲುಪುವ ನೆಲೆಯಿದು. ೮೦೦ ವರ್ಷಗಳಲ್ಲಿ ಆಗಿರುವ ಚಾರಿತ್ರಿಕ, ಸಾಮಾಜಿಕ, ಭೌತಿಕ ಬದಲಾವಣೆಗಳ ಒಟ್ಟು ಮೊತ್ತ ನಮ್ಮ ಗ್ರಹಿಕೆಗೆ ಮೊನಚು ತಂದಿದೆ ಎಂಬುದನ್ನು ಅವಗಣಿಸಿದರೆ ಮಾತ್ರ, ಬಸವಣ್ಣ ಪ್ರಜ್ಞಾಪೂರ್ವಕವಾಗಿ ಕೆಲ ಧೋರಣೆಗಳನ್ನು ತಳೆದ ಎಂದು ಹೇಳಬಹುದು. ಅಂದರೆ ಯಾವುದನ್ನು ನಾವು ಇವತ್ತು 'ಹೀನಾಯ,' 'ಶೋಷಣೆ' ಎಂದು ಗ್ರಹಿಸುತ್ತೇವೋ, ಅದು ಎಲ್ಲ ಕಾಲಗಳಲ್ಲೂ. ಎಲ್ಲ ದೇಶಗಳಲ್ಲೂ ಅದೇ ರೀತಿ ಗ್ರಹಿಸಲ್ಪಡುತ್ತದೆ ಎಂದು ವಾದಿಸಿದರೆ, ಜಗತ್ತಿನಲ್ಲಿ ನಿಷ್ಕಳಂಕ ಪ್ರಗತಿಪರ ಚಿಂತಕನೊಬ್ಬನು ನಮಗೆ ದೊರಕಲಿಕ್ಕಿಲ್ಲ! ನಾವು ಯಾವುದನ್ನು ಪ್ರಗತಿಪರ ಎಂದು ಕರೆಯುತ್ತೇವೋ ಅದು ಆ ಕಾಲ-ದೇಶಕ್ಕೆ ಸಾಪೇಕ್ಷವಾದದು, ಆ ಮಿತಿಗಳಿಂದ ಬಾಧಿತವಾದದ್ದು ಎಂಬುದನ್ನು ಮರೆತರೆ, ಬಸವಣ್ಣ ನಿಗೂ ಪೇಜಾವರ ಮಠಾಧೀಶರಿಗೂ ನಡುವೆ ಅಂತರವೆ ಇರಲಾರದೇನೋ! ಹಿರೇಮಠರು ಉದಾಹರಿಸಿದ 'ಹೊಲಸು ತಿಂಬುವವನೇ ಹೊಲೆಯ' ಎಂಬ ಸಾಲನ್ನು ಹಿಡಿದುಕೊಂಡು ಜಗ್ಗಾಡುವ ಆವಶ್ಯಕತೆಯಿಲ್ಲ. ಅವರು ಈ ಉದಾಹರಣೆ ಕೊಡದಿದ್ದರೂ, ಅವರ ಗ್ರಹಿಕೆಯಲ್ಲಿ ತೀವ್ರ ಬದಲಾವಣೆಯೇನೂ ಆಗುತ್ತಿರಲಿಲ್ಲ. ಯಾಕೆಂದರೆ

‘ಏಕದೇವತೋಪಾಸನೆ’ಯನ್ನು ‘ದಲಿತ ವಿರೋಧಿ’ ಉದಾಹರಣೆಯಾಗಿ ಬಳಸುವ ತರ್ಕವೇ, ವಚನಗಳ ಪದಪುಂಜಗಳನ್ನು ಸಾಕ್ಷಿಯಾಗಿ ನಿಲ್ಲಿಸುವಲ್ಲಿ ಕೆಲಸಮಾಡುತ್ತದೆ. ಅಂದರೆ ‘ಸಂಘಪರಿವಾರ’ದ ‘ರಾಮ’ನಿಗೂ, ಶರಣರ ‘ಲಿಂಗ’ದ ಕಲ್ಪನೆಗೂ ಯಾವ ವ್ಯತ್ಯಾಸವೂ ಇಲ್ಲವೆ? ಎರಡರ ನಡುವೆ ವ್ಯತ್ಯಾಸವೇ ಇಲ್ಲ. ‘ಸಂಘಪರಿವಾರ’ದ ‘ರಾಮ’ನ ಸಂಕೇತವೇ, ಶರಣರ ‘ಲಿಂಗದ’ ಸಂಕೇತ, ಇದೇ ಅದರ ‘ನಿಜಸ್ವರೂಪ’ ಎಂಬವಾದ ಮತ್ತೊಮ್ಮೆ ಚಾರಿತ್ರಿಕ-ಸಾಮಾಜಿಕ-ಭೌತಿಕ ಒಳಸಂಬಂಧಗಳನ್ನು ನಿರಾಕರಿಸುತ್ತದೆ. ಆಗ ಎಲ್ಲವೂ ಸರಳವಾದ ಗ್ರಹಿಕೆಗೆ ಸದ್ಯದ ತರ್ಕ (immidiate logic)ಗಳಿಂದ ತಕ್ಷಣವೇ ದೊರೆಯಬಲ್ಲ ಸಮೀಕರಣಗಳಾಗುತ್ತವೆ. ಮತ್ತೆ ಈ ಸಮೀಕರಣ ಕೂಡ ಸಾರ್ವಕಾಲಿಕವಾಗಿದ್ದು, ಎಲ್ಲ ಕಾಲಕ್ಕೂ ಅನ್ವಯಿಸಿ, ನಿರ್ಧಾರಗಳನ್ನು ಕೊಡಬಹುದಾಗುತ್ತದೆ.

‘ಏಕದೇವತೋಪಾಸನೆ’ಯು, ಹ್ಯಾಗೆ, ಜಗತ್ತು ವಿಸ್ತಾರಗೊಂಡಿದ್ದರ, ವ್ಯಾಪಾರ ಸಂಪರ್ಕ ವ್ಯಾಪಕವಾಗಿದ್ದರ ಫಲ ಎಂಬುದನ್ನು ಕ್ರಿಶ್ಚಿಯನ್, ಇಸ್ಲಾಂ ಧರ್ಮಕ್ಕೆ ಸಂಬಂಧಿಸಿ ಸಾಕಷ್ಟು ಅಧ್ಯಯನಗಳು ತೋರಿವೆ. ಹಾಗೇ ಭಕ್ತಿ ಪಂಥಗಳ ‘ಏಕದೇವತ’ ರೂಪಕ್ಕೂ, ಆ ವೇಳೆಗೆ ಸ್ಥಾಪಿತ ಶಕ್ತಿಗಳಾಗಿದ್ದ ಕ್ರಿಶ್ಚಿಯನ್, ಇಸ್ಲಾಂ ಧರ್ಮಗಳ ಸಾಂಪ್ರದಾಯಿಕ ಅರ್ಥಕ್ಕೂ ತೀವ್ರವಾದ ಅಂತರವಿತ್ತೆಂಬುದಕ್ಕೆ, ೧೫೯೦-೯೧ ರ ಕೃತಿಯಲ್ಲಿ ಕಬೀರನನ್ನು ಕುರಿತಾದ ಸಂಭಾಷಣೆಯಿಂದ ದೊರೆಯುತ್ತದೆ,

“ಕಬೀರ ಹಿಂದುವೋ ಅಥವ ಮುಸಲ್ಮಾನನೋ”
“ಆತನೊಬ್ಬ ಮುವಾಹ್ಹದಿ (ಏಕದೇವತಾವಾದಿ)”
“ಅಂದರೆ ಮುವಾಹ್ಹದಿ ಹಿಂದೂವೂ ಅಲ್ಲ, ಮುಸ್ಲಿಂನೂ ಅಲ್ಲವೆ?”
“ಇದನ್ನು ವಿವರಿಸುವುದು ಸ್ವಲ್ಪ ಕಷ್ಟದ ವಿಷಯ;........”

ಇಂತಹ ಸೂಕ್ಷ್ಮಗಳನ್ನು ಗಮನಿಸದೆ, ‘ಏಕದೇವತೋಪಾಸನೆ’ಯ ಬಗ್ಗೆ ತೀರ್ಪು ಕೊಡುವುದು, ಬರೀ ಅವಸರದ ಕ್ರಿಯೆಯಷ್ಟೇ ಅಲ್ಲ, ಅಪಾಯಕಾರಿ ಕೂಡ.

ಇತಿಹಾಸಕಾರ ಅತ್ತರ್ ಅಲಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್‌ನ (೧೯೮೯, ಘೋರಕ್‌ಪುರ) ಅಧ್ಯಕ್ಷ ಭಾಷಣದಲ್ಲಿ, ೧೫-೧೬ನೇ ಶತಮಾನಗಳಲ್ಲಿ ಗುಡಿಕೈಗಾರಿಕೆಯ ತಂತ್ರಜ್ಞಾನದಲ್ಲಾದ ವ್ಯಾಪಕ ಸುಧಾರಣೆ ನಗರ ಮಾರುಕಟ್ಟೆಯ ಹರವನ್ನು ಹ್ಯಾಗೆ ಹೆಚ್ಚಿಸಿತು, ತನ್ಮೂಲನದಲ್ಲಿ ‘ಏಕದೇವತಾ’ ಕಲ್ಪನೆಗಳು ಹ್ಯಾಗೆ ಮೂಡಿಬಂದಿರಬೇಕು ಎಂದು ಸೂಚ್ಯವಾಗಿ ತಿಳಿಸುತ್ತಾರೆ; ಅವರ ಪ್ರಕಾರ: “೧೫-೧೬ ನೇ ಶತಮಾನಗಳ ಜನಪ್ರಿಯ ಏಕದೇವತಾ ಚಳುವಳಿಗಳ ವೈಶಿಷ್ಟ್ಯವೆಂದರೆ, ಅವು ಅತ್ಯಂತ ಸಾಮಾನ್ಯ

ಜನರ ಚಳುವಳಿಯಾಗಿದ್ದವು; ಚಳುವಳಿಯ ನಾಯಕರು ಸಾಮಾನ್ಯರ ನಡುವಿನಿಂದಲೇ ಬಂದವರಾಗಿದ್ದರು ಮತ್ತು ಸಾಮಾನ್ಯರ ಭಾಷೆಯಲ್ಲೇ ಸಂಬೋಧಿಸಬಲ್ಲವರಾಗಿದ್ದರು; ಅವರಲ್ಲಿ ಸಾಮಾನ್ಯರಿಗೆ ತಲುಪಿಸಬೇಕಾದ ಗಟ್ಟಿಯಾದ ನೈತಿಕ ಸಂದೇಶಗಳಿದ್ದವು..."

[ಅತ್ತರ್ ಅಲಿ, ಎನ್‌ಕೌಂಟರ್ ಅಂಡ್ ಎಫ್ಲೊರಸೆನ್ಸ್: ಜನಸಿಸ್ ಆಫ್ ಮೀಡಿವಲ್ ಸಿವಿಲಯಸೇಷನ್, ಪಿಪಲ್ಸ್‌ಡೆಮಾಕ್ರಸಿ, ಜೂನ್ ೩' ೯೦].

ಇಷ್ಟೆಲ್ಲ ಸೂಕ್ಷ್ಮಗಳಿದ್ದರೂ, ಹಿರೇಮಠರಿಗೆ ಮಾತ್ರ ಅದು; 'ವೈದಿಕ ಮೂಲದ ಬಸವಣ್ಣನೇ ಪ್ರಬಲನಾಗುವುದು ಗಮನಾರ್ಹ'. ಇಲ್ಲಿ ಎಲ್ಲ ವಿಷಯಗಳಿಗಿಂತ ಬಸವಣ್ಣ (Subjective) ಮತ್ತು ವೈದಿಕ ಮೂಲ (objective determinism) ಮುಖ್ಯವಾಗುತ್ತವೆ. ಇದು ಎಷ್ಟು ಪ್ರಬಲವಾಗಿ ಕೆಲಸಮಾಡುತ್ತದೆ ಎಂದರೆ ಸಾಂಸ್ಥೀಕರಣಗೊಂಡ ಧರ್ಮಗಳಿಂದ ನಡೆಯುವ ಮತಾಂತರ ಕ್ರಿಯೆ ಹಾಗೂ 'ಭಕ್ತಿಪಂಥ' ತನ್ನ ಅನುಯಾಯಿಗಳ ಮೇಲೆ ಬೀರಿದ ಪ್ರಭಾವ, ಎರಡೂ ಒಂದೇ ಎಂಬ ಸರಳೀಕರಣಕ್ಕೆ ಹಿರೇಮಠರು ತಲುಪುತ್ತಾರೆ.!

ಮಹಾರಾಷ್ಟ್ರದ ಭಕ್ತಿಪಂಥದ ಪ್ರಭಾವ ಜ್ಯೋತಿಬಾ ಫೂಲೆಯವರ ಮೇಲೆ ಬೀರಿದ ಪ್ರಭಾವ; ಫೂಲೆಯವರ ಚಳುವಳಿಯ ಪ್ರಭಾವದಿಂದ ಮೂಡಿದ ಜಾಗೃತಿ; ಈ ಜಾಗೃತಿಯ ಚಾರಿತ್ರಿಕ ಫಲವಾದ ಅಂಬೇಡ್ಕರ್; ಫಲಶೃತಿಯಿಂದ ಮೂಡಿದ 'ದಲಿತ ಚಳುವಳಿ'–ಇವುಗಳ ದ್ವಂದ್ವ ಮಾನಾತ್ಮಕ ಅಧ್ಯಯನ ಮಾತ್ರ ನಮಗೆ 'ಶರಣ ಚಳುವಳಿ'ಗೂ, 'ದಲಿತ ಜಾಗೃತಿ'ಗೂ ಇರಬಹುದಾದ ಒಳಸಂಬಂಧಗಳ ಬಗ್ಗೆ ಬೆಳಕು ಚೆಲ್ಲಬಹುದು. ವಿಷಾದವೆಂದರೆ, ಹಿರೇಮಠರ ಯೋಚನಾ ವಿಧಾನದಲ್ಲಿ ಇವ್ಯಾವಕ್ಕೂ ಸ್ಥಾನವಿಲ್ಲವಾಗಿದೆ; ಮತ್ತೆ ಅವರ ಚಿಂತನ ಕ್ರಮ, 'ಪಾರ್ಶ್ವಿಕ ಸತ್ಯಗಳ' ಸುತ್ತಲೇ ಗಿರಕಿ ಹೊಡೆಯಬೇಕಾಗುತ್ತದೆ.

ಇಲ್ಲಿ ಪ್ರಾಸಂಗಿಕವಾಗಿ, ಸಂಘಪರಿವಾರ, ಭಕ್ತಿಪಂಥವನ್ನು ಹೇಗೆ ಕಾಣುತ್ತದೆ, ಎಂದು ನೋಡುವುದೊಳ್ಳೆಯದು, ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಕಟ್ಟುನಿಟ್ಟಿನ ಪರಿಪಾಲನೆಯನ್ನು, ಮತ್ತು ಅದನ್ನು ರಾಜ್ಯಬಲದಿಂದ ಕಾಪಾಡಿದ ಕ್ಷತ್ರಿಯ ವರ್ಗವನ್ನು, ಹಿಂದು ಧರ್ಮದ ಪ್ರತೀಕವೆಂದು ಪರಿಗಣಿಸುವ ಸಂಘಪರಿವಾರಕ್ಕೆ ಬಿಲ್ಲು ಎದೆಗೇರಿಸಿ, ಮಾಂಸಭರಿತ ತೋಳುಗಳನ್ನು ಪ್ರದರ್ಶಿಸುವ ಕ್ಷತ್ರಿಯ ರಾಮ ಮಾತ್ರ ಭಕ್ತಿಗೆ ಅರ್ಹನಾದವನು. ಈ ಶಕ್ತಿಯನ್ನು ಕಳೆದುಕೊಂಡ ಗಾಂಧೀಜಿಯವರ ರಾಮ, ಭಕ್ತಿ ನಿರ್ವೀರ್ಯವಾದುದು ಎಂದು ಅದು ಮೂದಲಿಸುತ್ತದೆ. ಹಾಗೆಯೇ ಭಕ್ತಿ ಪಂಥ ಕೂಡ ಈ ರೀತಿ ಶಕ್ತಿರಹಿತ ಭಕ್ತಿಯಿಂದ, ಮುಸ್ಲಿಂ ಧರ್ಮ ಪ್ರಚಾರದೆದುರು,

ನಿಲ್ಲುವ ಹಿಂದು ಶಕ್ತಿಯನ್ನು ನಿರ್ವೀರ್ಯ ಮಾಡಿತು ಎಂದು ವಾದಿಸುತ್ತದೆ. ಗಾಂಧೀಜಿಯ ಬಗ್ಗೆ ಬರೆದ ಈ ಸಾಲುಗಳನ್ನು ನೋಡಿ: "ಅವರು (ಗಾಂಧೀಜಿ) ಪೂರ್ಣ ಸ್ವರೂಪದ ರಾಮನ, ಅಂದರೆ ಸಮರ ವೀರತ್ವವನ್ನೂ ಹೊಂದಿದ, ಭಕ್ತರಾಗಿರಲಿಲ್ಲ. ಅವರಿಗೆ ರಾಮ ಪುರುಷೋತ್ತಮ ಪುರುಷ, ಅಂದರೆ ನೈತಿಕ ಜೀವನಕ್ಕೆ ಆದರ್ಶನಾದವ ಮಾತ್ರನಾಗಿದ್ದ..."

[ಗಿರಿಲಾಲ್ ಜೈನ್, ಇಡಿಯಂ ಆಫ್ ಪಬ್ಲಿಕ್ ಡಿಬೇಟ್–ಕಂಬೈನಿಂಗ್ ಭಕ್ತಿ ವಿತ್ ಪವರ್, ಟೈಮ್ಸ್ ಆಫ್ ಇಂಡಿಯ]

ಹಾಗೆಯೇ ಭಕ್ತಿಪಂಥವನ್ನು ಸಂಘಪರಿವಾರ ನೋಡುವ ಬಗೆಗೆ ಉದಾಹರಣೆ: "ಮುಸ್ಲಿಂ ಆಳ್ವಿಕೆಯಲ್ಲಿ ಪ್ರಬಲವಾಹಿನಿಯಾಗಿದ್ದ... (ಭಕ್ತಿಪಂಥ) ಸಂಪೂರ್ಣ ಭಿನ್ನವಾದ ಪ್ರಾಮುಖ್ಯತೆಯನ್ನ ಹೊಂದಿತು...ಆದು **ಪಲಾಯನವಾದವನ್ನು** ಜೀವನ ವಿಧಾನದ ಮಟ್ಟಕ್ಕೇರಿಸಿತು. ಬಡತನ, ಮಿತಜೀವನದ ಬಗ್ಗೆಗಿನ ಕುಂಟುವ ಆದರ್ಶಗಳು, ಸಾಮಾಜಿಕ ವಾಸ್ತವ ಮತ್ತು ಶಕ್ತಿಯ ಕುರಿತ ನಿರಾಸಕ್ತಿ, ವಿಶಾಲ ಪ್ರಭಾವ ಬೀರಿದದರಲ್ಲಿ ಇದು ವ್ಯಕ್ತವಾಗುತ್ತದೆ. **ಭಕ್ತಿಪಂಥ, ಹಿಂದು ದರ್ಶನ ಮತ್ತು ವ್ಯಕ್ತಿತ್ವ ಛಿದ್ರವಾಗುವುದಕ್ಕೆ ಅಭಿವ್ಯಕ್ತಿ ಹಾಗೂ ಸಾಧನವಾಯ್ತು**" [ಅದೇ, ಒತ್ತು ನನ್ನದು], ಇದರ ಅರ್ಥ ಸಂಘ ಪರಿವಾರಕ್ಕೆ ಅಸಿಂಧುವಾದುದು, ನಮಗೆ ಸಿಂಧುವಾಗಬೇಕೆಂದಲ್ಲ; ಭಕ್ತಿಪಂಥ ವರ್ಣಾಶ್ರಮ ವ್ಯವಸ್ಥೆಯ ಮರ್ಮಸ್ಥಾನಕ್ಕೆ ಕೊಟ್ಟ ಪೆಟ್ಟನ್ನು, ಸಂಘ ಪರಿವಾರ ಇಂದಿಗೂ, ಮುಟ್ಟಿ ನೋಡಿಕೊಳ್ಳುತ್ತಿರುವುದನ್ನು ನಾವು ಗಮನಿಸಬೇಕು. ಇವ್ಯಾವುದನ್ನು ಗಮನಿಸದೇ ಪೂರ್ಣ ಸತ್ಯ ಗೋಚರವಾಗದು.

ಇಂದಿನ ಹಿಂದುತ್ವದ ಸುಳ್ಳಿನಷ್ಟೇ, ಈ ವಾದವೂ ಜಳ್ಳಾಗಿತ್ತು ಎನ್ನುವ ಹಿರೇಮಠರು, ಇವತ್ತಿನ ಸಮಾಜದ ಮೂಲಾಂಶಗಳಿಂದ ೧೨ ನೇ ಶತಮಾನದ ವಿದ್ಯಮಾನಗಳನ್ನಳಿಯಲು ಉತ್ಸುಕರಾಗಿದ್ದಾರೆ. ಇವತ್ತಿನ ಸಮಾಜವನ್ನಳೆಯಲು ಉಪಯೋಗಿಸುವ ಮಾನದಂಡಗಳಿಂದ ಎಲ್ಲವನ್ನೂ ಕಾಣಲು ಉತ್ಸುಕವಾಗುವ ಪ್ರವೃತ್ತಿಯನ್ನು ಮಾರ್ಕ್ಸ್ 'certain judicial blindness' ಎಂದು ಕರೆಯುತ್ತಾರೆ. ಅತ್ಯಂತ ಬುದ್ಧಿವಂತರಾದ ತನ್ನ ಸಮಕಾಲೀನರೂ ಕೂಡ ಈ ಪ್ರವೃತ್ತಿಯಿಂದ ಬಳಲುತ್ತಿರುವರೆಂದು ತಿಳಿಸುವ ಮಾರ್ಕ್ಸ್, ಚರಿತ್ರೆಯ ಪದರುಗಳನ್ನು ಬಿಡಿಸುತ್ತ ಆದಿಯುಗಕ್ಕೆ ತಲುಪಿ ವಿಶ್ಲೇಷಿಸುವುದನ್ನು 'ಸಮಾಜವಾದಿ ದೃಷ್ಟಿಕೋನ'ವೆಂದು ಗುರುತಿಸುತ್ತಾರೆ; ಆಗ ಸಂಬಂಧಗಳ ಪೂರ್ಣ ರೂಪದ ಪ್ರಜ್ಞೆಯಿರದಿದ್ದರೂ, 'ಅತ್ಯಂತ ಪ್ರಾಚೀನವಾದುದರಿಂದ, ಅತ್ಯಂತ ನವೀನ'ವಾದುದನ್ನು ಪಡೆಯುತ್ತೇವೆ ಎಂದು ಮಾರ್ಕ್ಸ್ ವಿವರಿಸುತ್ತಾರೆ.

ಶರಣ ಚಳುವಳಿಯ ನಿಜಸ್ವರೂಪ ತಿಳಿಯಲು ಅತ್ಯವಶ್ಯಕವಾದದ್ದು. ಈ Judicial blindnessನಿಂದ ಮುಕ್ತವಾದುದು ಮತ್ತು ಸಮಾಜವಾದಿ ದೃಷ್ಟಿಕೋನ ಬೆಳಸಿ ಕೊಳ್ಳುವುದು. ಈ ಹಿನ್ನೆಲೆಯಲ್ಲಿ ಚಳುವಳಿಯ ನಿಜಸ್ವರೂಪ ತಿಳಿಯಲು, ಈ ಕೆಳಗಿನ ಅಂಶಗಳನ್ನು ವಿಸ್ತಾರವಾಗಿ ಪರಿಶೀಲಿಸಬೇಕು.

[ಇಲ್ಲಿ ತಳರಚನೆ ಮತ್ತು ಮೇಲ್‌ರಚನೆ (Base and Super Structure) ಒಂದಕ್ಕೊಂದು ಅಂತರ್ ಸಂಬಂಧ ಹೊಂದಿದ, ಒಂದರ ಮೇಲೊಂದು ನಿರಂತರ ಪ್ರಭಾವ ಬೀರುವ ಚರಿತ್ರೆಯ ಚಾಲಕ ಶಕ್ತಿಗಳು, ಇವುಗಳ ಆಧಾರದಲ್ಲಿ ವರ್ಗರಚನೆ, ವರ್ಗಪ್ರಾಬಲ್ಯಗಳ ಸ್ವರೂಪದಲ್ಲಿ ನಿರ್ಧಾರಾತ್ಮಕ ಬದಲಾವಣೆಗಳಾಗುತ್ತಿರುತ್ತವೆ ಎಂಬ ಚರಿತ್ರೆಯ ಭೌತವಾದಿ ದೃಷ್ಟಿಕೋನ ಪ್ರಮುಖವಾಗಿದೆ.]

೧) ಕ್ರಿ. ಶ. ೯೦೦–೧೩೦೦ ರ ವರೆಗೆ, ದಕ್ಷಿಣ ಭಾಗದಲ್ಲಿ ಪ್ರಬಲವೂ ಸ್ಥಿರವೂ ಆಗಿದ್ದ ಚೋಳ ಸಾಮ್ರಾಜ್ಯ: ಅದರ ಆಡಳಿತ ವಿಧಾನ, ಶ್ರೇಣಿಗಳು.

೨) ಈ ಕಾಲದಲ್ಲಿನ ಭೂಸಂಬಂಧ, ವ್ಯಾಪಾರ ಸಂಬಂಧ. ಇವುಗಳನ್ನಾಧರಿಸಿದ ವರ್ಗ ಸ್ವರೂಪ.

೩) ಗ್ರಾಮ-ನಗರಗಳ ನಡುವೆ ಇದ್ದ ಸಂಬಂಧಗಳ ರೂಪ.

೪) ಈ ಹಿನ್ನೆಲೆಯಲ್ಲಿ ರೂಪ ತಳೆದಿದ್ದ ಜಾತಿ-ಶ್ರೇಣೀಕರಣ, ವರ್ಗ ಪ್ರಭಾವ.

೫) ಈ ಕಾಲದಲ್ಲಿ ಇಂಡೋ ಚೈನ ಮತ್ತು ಪಶ್ಚಿಮ ಏಶಿಯಾಗಳೊಡನೆ ದಕ್ಷಿಣ ರಾಜ್ಯಗಳ ವ್ಯಾಪಾರ ಸಂಬಂಧ; ಇದು ಬೀರಿದ ವಿವಿಧ ಪ್ರಭಾವ.

೬) ಈ ಸ್ಥಿತಿಗಳಲ್ಲಿ (ಮತ್ತು'ಯಿಂದ') ಬೆಳೆದ ಪ್ರಭಾವಶಾಲಿ ತಮಿಳು ಭಕ್ತಿ ಪಂಥ, ಅದರ ಪ್ರಸಾರಕ್ಕೆ ಸಾಧ್ಯವಾದ ಮಾಧ್ಯಮ.

೭) ಚಿಸ್ತಿ ಸೂಫಿ ಪಂಥ; ಇಸ್ಲಾಂ ಧರ್ಮದ ಪ್ರಭಾವ; ದಕ್ಷಿಣದಲ್ಲಿ ಉತ್ತರ ಸಾಮ್ರಾಜ್ಯಗಳ ಶಕ್ತಿ ಸ್ಥಾಪನೆ.

(ಸಂಕ್ಷಿಪ್ತ ವಿವರಗಳಿಗೆ ನೋಡಿ: A History Of India By Romila Thapar),

ಇದು ತನಗೆ ತಾನೇ, ದೀರ್ಘವಾದ ಅಧ್ಯಯನ. ಇಲ್ಲಿ ವಿವಿಧ ಮೂಲಗಳ ಕ್ರೋಢೀಕರಣಗಳ ಜೊತೆ, ಅವುಗಳನ್ನು ಸಮರ್ಥವಾಗಿ ವ್ಯಾಖ್ಯಾನಿಸುವ ವೈಜ್ಞಾನಿಕ ಸಿದ್ಧಾಂತ, ಚಿಂತನ ಕ್ರಮಗಳು ಅತ್ಯವಶ್ಯಕ ಎಂಬುದರತ್ತ ಗಮನ ಸೆಳೆಯಲು ಸಂಕ್ಷಿಪ್ತವಾಗಿ ಮಾತ್ರ, ಕೆಲ ಅಂಶಗಳನ್ನು ಚರ್ಚಿಸಿದ್ದೇನೆ,

(೨) ಶರಣ ಚಳುವಳಿ 'ಆಧ್ಯಾತ್ಮಿಕ-ವೈದಿಕ ಪರಂಪರೆಯ ಮುಂದುವರಿಕೆ':
"ಆದಿಕಾಲದ ವೈದಿಕ, ಮಧ್ಯಕಾಲದ ಬ್ರಾಹ್ಮಣ, ಆಧುನಿಕ ಹಿಂದುವಾದಗಳ ಬ್ರಾಹ್ಮಣ ವೈದಿಕ ಪರಂಪರೆಯಲ್ಲಿ, ಲಿಂಗಾಯತವೂ ಸೇರಿ..." ಎಂದು ಗ್ರಹಿಸುವಾಗ ಹಿರೇಮಠರು, ಇವುಗಳಲ್ಲಿ ಯಾವುದೇ ಗುಣಾತ್ಮಕ ಭೇದಗಳಿಲ್ಲ ಮತ್ತು ಇವುಗಳೆಲ್ಲ ಒಂದೇ ಉದ್ದೇಶ ಸಾಧನೆಯಿಂದ ಪ್ರೇರಿತವಾದವುಗಳು, ಎಂದು ದೃಢವಾಗಿ ನಂಬಿದಂತೆ ತೋರುತ್ತದೆ. ಇದರ ಹಿಂದೆ ಬ್ರಾಹ್ಮಣತ್ವ ಎಂಬ 'objective determinism', ಬೇರೆ ಬೇರೆ ವೇಷಗಳಲ್ಲಿ ತನ್ನನ್ನು ತೋರಿಕೊಂಡಿದೆಯೇ ಹೊರತು, ಕಾಲ ಯಾವ ಗುಣಾತ್ಮಕ ಪ್ರಭಾವವನ್ನೂ ಈ ಬೆಳವಣಿಗೆಗಳ ಮೇಲೆ ಬೀರಿಲ್ಲ ಎನ್ನುವ ವಾದವಿದೆ. ಹೀಗೆ ಯೋಚಿಸುವಾಗ ಆದಿಕಾಲದ ವೈದಿಕ ತಾತ್ವಿಕತೆಗೂ ಚಿಂತನೆಗೂ, ರೂಪಕಕ್ಕೂ, ಮಧ್ಯಯುಗೀನ ಬ್ರಾಹ್ಮಣತ್ವವಾದಕ್ಕೂ ವಿಪರೀತ ವ್ಯತ್ಯಾಸಗಳಿವೆ; ವಿಸ್ತಾರವಾದ ಅಧ್ಯಯನ ಈ ರೂಪಾಂತರ ಪ್ರಕ್ರಿಯೆಯ ಮೂಲಗಳನ್ನು ಶೋಧಿಸಿ ಬಹಿರಂಗಪಡಿಸಿವೆ, ಎಂಬುದು ಮುಖ್ಯವಾಗುವುದಿಲ್ಲ. ಹಾಗೆಯೇ ಸಂಘಪರಿವಾರದ ಹಿಂದುತ್ವ ಆದಿ, ಮಧ್ಯಯುಗದ ಅರ್ಥದ ಹಿಂದು ಧರ್ಮಕ್ಕಿಂತ ತೀರಾ ಭಿನ್ನವಾದ ತಿರುವನ್ನು ಪ್ರಜ್ಞಾಪೂರ್ವಕವಾಗಿಯೇ ಕೊಡಲು ಯತ್ನಿಸುತ್ತಿದೆ. ಸೆಮೆಟಿಕ್ ಮತಗಳಿಗೆ ಪ್ರತಿಸ್ಪರ್ಧಿಯಾಗುವಂತೆ ಹಿಂದು ಧರ್ಮದ ಸೆಮೆಟೈಸೇಷನ್‌ನ್ನು ವಿಹಿಂಪ ಎಷ್ಟು ಪ್ರಜ್ಞಾಪೂರ್ವಕವಾಗಿ ಅಭಿವ್ಯಕ್ತಿಸುತ್ತಿದೆ, ಎಂಬುದನ್ನು ಸಮಕಾಲೀನ ಸಮಾಜಶಾಸ್ತ್ರಜ್ಞರು, ಸಾಂಸ್ಕೃತಿಕ ಇತಿಹಾಸಕಾರರು ವಿವರವಾಗಿ ಚರ್ಚಿಸಿದ್ದಾರೆ ಎಂಬುದೂ ಗೌಣವಾಗುತ್ತದೆ. ತತ್ಫಲವಾಗಿ, ಒಂದೇ ಮೂಲದಿಂದ ಬಂದಿವೆ ಎಂದು ತೋರುವ ಚಿಂತನೆಗಳ ಮೇಲೆ, ಉತ್ಪಾದನೆ-ಮರುಉತ್ಪಾದನೆಯ ಚಾರಿತ್ರಿಕ ಪ್ರಕ್ರಿಯೆ ಬೀರುವ ಪ್ರಭಾವ ನಿಕೃಷ್ಟವಾಗಿ ತೋರುತ್ತದೆ. ಮತ-ಧರ್ಮಗಳು ನಿರಂತರ ರೂಪ ಬದಲಾವಣೆಗೆ ಒಳಗಾಗಿರುತ್ತವೆ ಎಂಬುದು ಗೋಚರಿಸುವುದಿಲ್ಲ: ವರ್ತಮಾನದ ಕನ್ನಡಕದ ಮೂಲಕ ಭೂತವನ್ನು ಅಳೆಯುವ ಅಚಾರಿತ್ರಿಕ ವಿಧಾನದ ಬಗ್ಗೆ ಎಳ್ಳು ಕಾಳಿನಷ್ಟು ಅನುಮಾನ ಉದ್ಭವವಾಗುವುದಿಲ್ಲ. ತಾರ್ಕಿಕವಾಗಿಯೇ ಈ ದಾರಿ, ವೇದ-ಉಪನಿಷತ್ತುಗಳು, ಶೋಷಣೆಯ ಪೂರ್ಣರೂಪದ ಅರಿವನ್ನು ಹೊಂದಿದ್ದ, ಶೋಷಣೆಯು ಎಲ್ಲ ಆಶಯಗಳನ್ನು ಒಂದೇ ಸಾರಿಗೆ ಸರ್ವಕಾಲಕ್ಕೂ ಅನುಗುಣವಾಗುವಂತೆ ಮೈಗೂಡಿಸಿಕೊಂಡ ವರ್ಗದ ಪ್ರಜ್ಞಾಪೂರ್ವಕ, ರಚನೆಗಳು, ಎಂಬಲ್ಲಿ ಬಂದು ತಲುಪುತ್ತದೆ. ಇದೇ 'ಸಂಕುಚಿತವಾದ'ದ ಪ್ರಾರಂಭ ಬಿಂದುವೂ ಆಗಿದೆ. ಈ 'ಸಂಕುಚಿತವಾದ'ದ ಪ್ರಕಾರ ಆದಿ, ಮಧ್ಯಮ ಯುಗದ ಸಾಮಾಜಿಕ–ಸಾಂಸ್ಕೃತಿಕ ಚರಿತ್ರೆ ಬರೀ 'ಬ್ರಾಹ್ಮಣ/ಶೋಷಕ ವರ್ಗ'ದ ಚರಿತ್ರೆಯಾಗಿರುತ್ತದೆ. ಇಲ್ಲಿ ಶೋಷಿತ ವರ್ಗಕ್ಕೆ ತನ್ನದು ಎಂದು ಹೇಳಿಕೊಳ್ಳುವ, ತನ್ನ ಪಾತ್ರ ಎಂದು ತೋರಿಸಿಕೊಳ್ಳುವ ಯಾವ ಅಂಶವೂ ಇರುವುದಿಲ್ಲ. ಹೀಗಾಗಿ ಇಂತಹ

ಸಾಂಸ್ಕೃತಿಕ ಚರಿತ್ರೆಯೊಂದರ ವಾರಸುದಾರಿಕೆ (Inheritance) ಯನ್ನು 'ಶೋಷಕರು' ಮತ್ತು 'ದಲಿತ ವಿರೋಧಿ'ಗಳು ಮಾತ್ರ ಪಡೆಯುತ್ತಾರೆ. ಈ ವಾದ, 'ಇದುವರೆಗಿನ ಸಾಂಸ್ಕೃತಿಕ ಚರಿತ್ರೆ ಬ್ರಾಹ್ಮಣ/ಆಳುವರ್ಗದ ಸಾಂಸ್ಕೃತಿಕ ಚರಿತ್ರೆ; ಇದರಲ್ಲಿ ಶೋಷಿತವರ್ಗಕ್ಕೆ ಯಾವ ಪಾಲು ಇರಕೂಡದು; ಈ ಸಂಸ್ಕೃತಿಯ ಸಂಪೂರ್ಣ ನಾಶದಿಂದಲೇ, ಶೋಷಿತ ವರ್ಗದ ಸಂಸ್ಕೃತಿ ಪ್ರಾರಂಭದಿಂದ ಪ್ರಾರಂಭವಾಗಬೇಕು' ಎಂಬಲ್ಲಿ ಉತ್ತುಂಗಕ್ಕೇರುತ್ತದೆ. ಇದನ್ನೇ ಪ್ರತಿಸಂಸ್ಕೃತಿ (counter culture) ಯೆಂದು ಕರೆದುಕೊಳ್ಳಲಾಗುತ್ತದೆ. ದಲಿತರ ಪರವಾಗಿ ಮಂಡಿತವಾಗುವಾಗ ಪ್ರಗತಿಪರವಾಗಿ ತೋರುವ ಈ ವಾದದ ತೆರೆಯನ್ನು ಸ್ವಲ್ಪ ಸರಿಸಿದರೆ, 'ಮತೀಯವಾದಿ'ಗಳಿಗೆ ಮೂಲವಾಗಿರುವ ಗ್ರಹಿಕೆಯನ್ನೇ ಈ ವಾದ ಮನ್ನಿಸುತ್ತದೆ ಎಂಬುದು ಸಾಬಿತಾಗುತ್ತದೆ! ಯಾಕೆಂದರೆ, ಇವೆರಡೂ, ಉಪಖಂಡದ ಸಾಂಸ್ಕೃತಿಕ ಚರಿತ್ರೆ, ಪ್ರಭೇದಗಳಿಲ್ಲದ, ಘರ್ಷಣೆಗಳಿಲ್ಲದ ಏಕಮುಖಿಯಾಗಿಯೇ ಹರಿದು ಬಂದ ಏಕತ್ರ (monolithic) ಸಂಸ್ಕೃತಿ ಎಂಬ ನೆಲೆಯಿಂದಲೇ ಪ್ರಾರಂಭವಾಗುತ್ತವೆ. ಮತೀಯವಾದಿಗಳಿಗೆ ಭಕ್ತಿಪಂಥ ಹಿಂದೂ ಧರ್ಮದ ಪುರುಷ ಕಳೆದುಕೊಂಡ ನಿರ್ವೀರ್ಯ ಶೇಷ; ಪ್ರತಿಸಂಸ್ಕೃತಿವಾದಿಗಳಿಗೆ ಭಕ್ತಿಪಂಥ ಇಂತಹ ಪುರುಷ ಶಕ್ತಿಯನ್ನು ಎದುರಿಸಲಾಗದೇ ಅದಕ್ಕೆ ಅಡಿಯಾಳಾದ ಷಂಡರ ಗುಂಪು; ಅವರು ಯಾವುದನ್ನು ಹಿಂದೂ ಧರ್ಮದ ಸಾರ ಎಂದು ಹೇಳುತ್ತಾರೋ, ಯಾವುದರ ಬಗ್ಗೆ ಹೆಮ್ಮೆಪಡುತ್ತಾರೋ, ಇವರು ಅದನ್ನು ಸಾರಾಸಗಟ ಒಪ್ಪುತ್ತಾರೆ ದ್ವೇಷಿಸುತ್ತಾರೆ. ಈ ಸಂದರ್ಭದಲ್ಲಿ ಜಿ. ರಾಜಶೇಖರರ ಮಾತುಗಳನ್ನು ನೆನೆಯುವುದೊಳ್ಳೆಯದು:

"ಈ ನಾಡಿನ ಧರ್ಮ ಮತ್ತು ಸಂಸ್ಕೃತಿ, ಧರ್ಮ ಮತ್ತು ಪ್ರಭುತ್ವ, ಧರ್ಮಗಳ ಪುರೋಹಿತಶಾಹಿ ಮತ್ತು ಬಂಡಾಯಗಾರರು...ಇವುಗಳಲ್ಲಿ ಪರಸ್ಪರ ವ್ಯತ್ಯಾಸವೇ ಇಲ್ಲವೆಂಬಂತೆ ಯೋಚಿಸುವುದು ಮತ್ತು ಬರೆಯುವುದು ಆಲಸ್ಯ ಅಥವ ದಡ್ಡತನ ವಷ್ಟೇ ಅಲ್ಲ, ಅದು ಮತೀಯವಾದಿಗಳ ತರ್ಕವೂ ಆಗಿದೆ...... ಸಂಸ್ಕೃತಿಯೆಂದರೆ ಹಿಂದು-ವೈದಿಕ ಬ್ರಾಹ್ಮಣ ಸಂಸ್ಕೃತಿಯಷ್ಟೇ ಅಲ್ಲ, ಅದು ಬಹುರೂಪಿಯಾದದ್ದು..." [ಜಿ. ರಾಜಶೇಖರ್, "ಬಿಜಾಪುರದ ಸೂಫಿಗಳು", ಸಾಹಿತ್ಯ ವಿಮರ್ಶೆ ೧೯೮೮, ಪು ೧೪೬]. ಇವತ್ತು ನಾವು ಎದುರಿಸುತ್ತಿರುವ ವಿಷಪೂರಿತ ಪರಿಸ್ಥಿತಿಗೆ, ಭೂಖಂಡದ ಸಂಸ್ಕೃತಿಯನ್ನು ಸಂಕುಚಿತ ದೃಷ್ಟಿಕೋನದಿಂದ, ಅಸಡ್ಡೆಯಿಂದ ಕಂಡದ್ದರ ಕೊಡುಗೆಯೂ ದೊಡ್ಡ ರೀತಿಯಲ್ಲಿದೆ.

ಇಷ್ಟೆಲ್ಲ ಚರ್ಚೆಯ ನಂತರ, ಹಿರೇಮಠರು, ಗುಣಾತ್ಮಕವಾದ ಯಾವ ಪ್ರಶ್ನೆಯನ್ನೂ ಎತ್ತಿಲ್ಲವೆಂದಲ್ಲ. ಶರಣ ಚಳುವಳಿಯ ಕಾಲಘಟ್ಟಕ್ಕೆ ಮೊದಲೆ, ಉಪಖಂಡದಲ್ಲಿ

ಭೌತವಾದಿ ಚಿಂತನಕ್ರಮ ವಿವಿಧ ರೂಪಗಳಲ್ಲಿ ಅಸ್ತಿತ್ವದಲ್ಲಿತ್ತು. ಅದು ಶರಣ ಚಳುವಳಿಯ ಮೇಲೆ ಯಾವ ಪ್ರಭಾವ ಬೀರಿತ್ತು ? ಶರಣ ಚಳುವಳಿ ಸಾಂಸ್ಥೀಕರಣಗೊಂಡದ್ದು ಯಾವಾಗ, ಯಾವ ಚಾರಿತ್ರಿಕ ಒತ್ತಡಗಳಲ್ಲಿ ? ಶರಣ ಚಳುವಳಿಯ ಕಾಲಘಟ್ಟದಲ್ಲೇ, ಅದಕ್ಕಿಂತ Radical ಆದ ಯಾವುದಾದರೂ ಚಳುವಳಿ ಮೊಳಕೆಯೊಡೆದಿತ್ತೇ ?–ಇವೆಲ್ಲದರ ಬಗ್ಗೆ ನೋಡಬೇಕೆಂದು ಹಿರೇಮಠರ ಲೇಖನ ಆಶಿಸುತ್ತದೆ. ಆದರೆ ಯಾವುದೇ ಸರಳೀಕರಣ, ಸಂಕುಚಿತವಾದ ಇವಕ್ಕೆ ಉತ್ತರ ಒದಗಿಸಲಾರವು, ಯಾವ ಸಂಸ್ಕೃತಿ ಶೋಷಿತವರ್ಗದ್ದು ? ಯಾವುದು ಶೋಷಕವರ್ಗದ್ದು ? ಪರಂಪರೆಯಲ್ಲಿನ ಯಾವುದಕ್ಕೆ ಶೋಷಿತ ವರ್ಗ ವಾರಸುದಾರರು ? ಅವರದ್ದೆ ಆದದ್ದು, ಚರಿತ್ರೆಯಲ್ಲಿ ಏನೂ ಇಲ್ಲವೆ ? ಇವೆಲ್ಲ ಪ್ರಶ್ನೆಗಳು ಚರ್ಚೆಗೊಳಗಾಗಬೇಕಾಗಿದೆ. ಈ ಹಿನ್ನೆಲೆಯಲ್ಲಿ, ೧೯ ನೇ ಶತಮಾನದ ಜರ್ಮನಿಯ ಕಾರ್ಮಿಕರನ್ನು ಕುರಿತು ಫ್ರೆಡ್ರಿಕ್ ಏಂಗೆಲ್ಸ್ ಚಿಂತಿಸಿದ ರೀತಿ, ಈ ನಿಟ್ಟಿನಲ್ಲಿ ಇಂದಿಗೂ ಪ್ರಸ್ತುತವಾದುವು ಎಂದು ನನ್ನ ಅನಿಸಿಕೆ. ಆ ಸಾಲುಗಳೊಂದಿಗೆ ಈ ಪ್ರತಿಕ್ರಿಯೆ ಕೊನೆಗೊಳಿಸುತ್ತೇನೆ;

"Only among the working class does the German aptitude for theory remain unimpaired……the more ruthlessly and disinterestedly science proceeds the more it finds itself in harmony with interests and aspirations of workers. The new tendency which recognised that the key understanding of whole history of development of labour, from the outset addressed itself by preference to working class and here it found the response which it neither sought nor expected from officially recognised science. **The German working class movement is inheritor of German classical philosophy"**

[F. Engels, Preface to "Ludwig Fuerbach and end of classical German philosophy"]

ಕೆ. ಫಣಿರಾಜ್, ಮಂಗಳೂರು

# ಪ್ರತಿಕ್ರಿಯೆ : ಎರಡು

ಕನ್ನಡ ಸಂಸ್ಕೃತಿ ಕುರಿತ ಸಂವಾದದಲ್ಲಿ ಅತ್ಯಂತ ಕ್ರಿಯಾಶೀಲರಾಗಿರುವ ಎಸ್. ಎಸ್. ಹಿರೇಮಠರವರ ಶರಣ ಚಳುವಳಿಯ ನಿಜಸ್ವರೂಪ ಲೇಖನ ಬಿತ್ತಿರುವ ಒಂದೆರಡು ಪ್ರಶ್ನೆಗಳನ್ನು ಚರ್ಚೆಗೆತ್ತಿಕೊಳ್ಳುವುದು ಈ ಟಿಪ್ಪಣಿಯ ಉದ್ದೇಶವಾಗಿದೆ.*

ಶರಣ ಚಳುವಳಿಯ ನೇತ್ಯಾತ್ಮಕ ನೆಲೆಗಳನ್ನು ಅವರು ಎರಡು ಅಂಶಗಳಾಗಿ ವಿಂಗಡಿಸಿಕೊಂಡಿದ್ದಾರೆ.

೧. ದಲಿತ ವಿರೋಧಿ ಕ್ರಮ.

೨. ಆಧ್ಯಾತ್ಮಿಕ ವೈದಿಕ ಪರಂಪರೆ ಸಮರ್ಥನೆ.

ಶರಣ ಚಳುವಳಿಯು ದಲಿತ ವಿರೋಧಿಯಾಗಿತ್ತು ಎಂಬುದಕ್ಕೆ ಲೇಖಕರು ಕೊಡುವ ಕಾರಣಗಳು ಇವು.

೧. ಏಕದೇವೋಪಾಸನೆಯನ್ನು ಚಳುವಳಿ ಒತ್ತಿ ಹೇಳಿತು.

೨. ವೈದಿಕ-ಅವೈದಿಕ ದ್ವಂದ್ವದ ಸಂಘರ್ಷದಲ್ಲಿ ವೈದಿಕ ಮೂಲದ ಬಸವಣ್ಣನೇ ಪ್ರಬಲನಾಗುವುದು,

೩. ಬಸವಣ್ಣ ವೀರಶೈವವನ್ನು ಬ್ರಾಹ್ಮಣತ್ವಕ್ಕೇರಿಸಲು ಪ್ರಯತ್ನಿಸುತ್ತಾನೆ.

೪. ವೀರಶೈವ ಚಳುವಳಿಯು ವೈದಿಕತೆಯಿಂದ ಪ್ರತ್ಯೇಕಗೊಳ್ಳಲು ಸಾಧ್ಯವಾಗಲೇ ಇಲ್ಲ.

೫. ಶರಣ ಚಳುವಳಿಯು ಬ್ರಾಹ್ಮಣ ಪುರೋಹಿತಶಾಹಿಯನ್ನು ಹಾಗೂ ಕೆಳಜಾತಿ ಜನರ ಸಂಸ್ಕೃತಿಯನ್ನು ಏಕಕಾಲಕ್ಕೆ ವಿರೋಧಿಸಿತು.

೬. ದಲಿತ-ಕೆಳಜಾತಿ ಜನರು ಆರಾಧಿಸುವ ದೇವರುಗಳನ್ನು ಕಟುವಾಗಿ ಟೀಕಿಸುವಲ್ಲಿ ಶರಣರ ವಿರೋಧಿತ್ವ ವ್ಯಕ್ತವಾಗುತ್ತದೆ,

೭. ವೈದಿಕ ಮೂಲದ ಪುರುಷ ಪ್ರಾಬಲ್ಯ ಶರಣ ಚಳುವಳಿಯಲ್ಲೂ ಮುಂದುವರಿಯಿತು.

೮. ಬಸವಣ್ಣನು ಹೊಲೆ-ಮಾದಿಗರ ಕಾಯಕವನ್ನೇನು ಮಾಡಲಿಲ್ಲ.

೯. ದಲಿತ-ಕೆಳಜಾತಿ ಜನರ ಆಹಾರ ಪದ್ಧತಿಯನ್ನು ಶರಣ ಚಳುವಳಿ ವಿರೋಧಿಸಿತು.

ಶರಣ ಚಳುವಳಿಯು ವೈದಿಕ ಪರಂಪರೆಯ ಅನುಬಂಧವಾಗಿತ್ತು ಎಂಬುದಕ್ಕೆ ಲೇಖಕರು ಕೊಡುವ ಕಾರಣಗಳು ಇವು.

---

* ಇಲ್ಲಿ ವಚನಾಂಕಗಳು ಆರ್. ಸಿ. ಹಿರೇಮಠರು ಸಂಪಾದಿಸಿರುವ 'ಬಸವಣ್ಣನವರ ವಚನಗಳ'ಗೆ ಸಂಬಂಧಿಸಿದವು.

೧. ಕರ್ಮ ಸಿದ್ಧಾಂತವನ್ನು ವೀರಶೈವ ಸಿದ್ಧಾಂತ ಒಪ್ಪಿಕೊಂಡಿತು.
೨. ವೀರಶೈವ ಮಠಾಧಿಪತಿಗಳು ಬ್ರಾಹ್ಮಣ ಮಠಾಧಿಪತಿಗಳಂತೆ ವರ್ತಿಸುತ್ತಾರೆ.
೩. ಈ ಚಳುವಳಿ ಒಂದು ಹಂತದಲ್ಲಿ ಬಸವಣ್ಣ ಹಾಗೂ ಅವನ ಅನುಯಾಯಿಗಳನ್ನೇ ನಿರ್ಲಕ್ಷಿಸಿತು.
೪. ಪಂಚಪೀಠ–ಸಂಸ್ಕೃತ ವೈದಿಕಾಚರಣೆಗೆ ಚಳುವಳಿ ಕುಮ್ಮಕ್ಕು ಕೊಟ್ಟಿತು.
೫. ಅವೈದಿಕ ಕಾಳಜಿಯು ಈ ಚಳುವಳಿಯಲ್ಲಿರಲೇ ಇಲ್ಲ.

೨

ಶ್ರೀ ಹಿರೇಮಠರ ವಾದವೆಲ್ಲ ಒಂದು ಊಹೆಯ ಮೇಲೆ ನಿಂತಿದೆ ಎಂದು ನನಗನ್ನಿಸುತ್ತದೆ. ಶರಣ ಚಳುವಳಿಯನ್ನು ೧೨ನೇ ಶತಮಾನದಿಂದ ನಿರಂತರವಾಗಿ ಇಂದಿನ ವರೆಗೆ ಹರಿದು ಬಂದ ಒಂದು ಅಖಂಡ ಚಳುವಳಿ ಎಂದು ಅವರು ನಂಬಿರುವಂತೆ ಕಾಣುತ್ತದೆ; ಅವರ ತೀರ್ಮಾನಗಳೆಲ್ಲಾ ಈ ಊಹೆಯ ಮೇಲೆ ನಿಂತಂತೆ ಕಾಣುತ್ತದೆ,

ಶರಣ ಚಳುವಳಿಯನ್ನು ನಾವು ನಿರ್ದಿಷ್ಟವಾಗಿ ೧೧೦೦ ರಿಂದ ೧೧೭೦ (ಕ್ರಿ. ಶ.)ದ ವರೆಗೆ ಮಾತ್ರ ಸೀಮಿತಗೊಳಿಸಿಕೊಳ್ಳಬೇಕು. ಆ ಅವಧಿಯನ್ನು ಬಿಟ್ಟು ತದನಂತರ ನಡೆದದ್ದೆಲ್ಲಾ ಶರಣ ಚಳುವಳಿಯ ಅಪಮೌಲ್ಯವೇ ಹೊರತು ಅನುಷ್ಠಾನವಲ್ಲ. ಈ ಕಾರಣಕ್ಕೆ ಒಂದು ಹಂತದಲ್ಲಿ ಈ ಚಳುವಳಿಯು ಬಸವಣ್ಣ ಹಾಗೂ ಅವನ ಅನುಯಾಯಿಗಳನ್ನೇ ನಿರ್ಲಕ್ಷಿಸಿಬಿಟ್ಟಿತು. (ಹಿರೇಮಠರು ಇದನ್ನು ಹೇಳುತ್ತಾರೆ)

ಶರಣ ಚಳುವಳಿಯ ಅಪಮೌಲ್ಯ ಹಾಗೂ ಹಿರೇಮಠರು ಹೇಳುವ ದಲಿತ ವಿರೋಧಿ ಕ್ರಮ ಮತ್ತು ಆಧ್ಯಾತ್ಮಿಕ ವೈದಿಕ ಪರಂಪರೆಯ ಸಮರ್ಥನೆ ಪ್ರಾರಂಭವಾದುದು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಎಂದು ಹೇಳಬಹುದು. ವಿಜಯನಗರ ಸಾಮ್ರಾಜ್ಯದ ಪ್ರೌಢ ದೇವರಾಯನ ಕಾಲದಲ್ಲಿ ಲಕ್ಕಣ್ಣ ದಂಡೇಶ, ಮೊಗ್ಗೆಯ ಮಾಯಿದೇವ, ಕರಸ್ಥಲದ ನಾಗಿದೇವ, ಕಲ್ಲುಮಠದ ಪ್ರಭುದೇವ ಮುಂತಾದವರ ನೇತೃತ್ವದಲ್ಲಿ ವೀರಶೈವಕ್ಕೆ ಸಂಬಂಧಿಸಿದಂತೆ ಸೂತ್ರ, ರಹಸ್ಯ, ಯೋಗಾಂಗ, ಅಷ್ಟವಿಧಾರ್ಚನೆ, ಮಂತ್ರೋತ್ಪತ್ತಿ, ದೀಕ್ಷಾ ವಿಧಾನ, ಲಿಂಗ ಮಹಿಮೆ ಮುಂತಾದವುಗಳ ಬಗ್ಗೆ ಕೃತಿಗಳು ನಿರ್ಮಾಣವಾದವು. ಶರಣ ಚಳುವಳಿಯ 'ವೈದಿಕೀಕರಣ' ಹೀಗೆ ೧೫ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪ್ರಾರಂಭವಾಯಿತೆನ್ನಬೇಕು. ಆದರೆ ಈ ವೈದಿಕೀಕರಣವನ್ನು ೧೨ನೇ ಶತಮಾನದ ಶರಣ ಚಳುವಳಿಗೆ, ಬಸವಣ್ಣನಿಗೆ ಆರೋಪಿಸುವುದು ಸರಿಯಾಗುವುದಿಲ್ಲ.

ಶರಣ ಚಳುವಳಿಯು ನಿರ್ಮಿಸಲು ಪ್ರಯತ್ನಿಸಿದ 'ಪರ್ಯಾಯ ಸಂಸ್ಕೃತಿ'ಯ ನೆಲೆ ಸಾಮಾಜಿಕವಾದುದಾಗಿತ್ತು. ಧಾರ್ಮಿಕತೆಯ ಅಂಶವು ಕಡಿಮೆ ಇತ್ತು. ಆದರೆ

೧೫ನೇ ಶತಮಾನದ ನಂತರ ಇದು ತನ್ನ ಸಾಮಾಜಿಕ ಸ್ವರೂಪವನ್ನು ಪೂರ್ಣವಾಗಿ ಕಳೆದುಕೊಂಡಿತು. ೧೨ನೇ ಶತಮಾನದಲ್ಲಿ ಮಾತನಾಡಿದ್ದು ಸಮಾಜ, ತದನಂತರ ಮಾತನಾಡಿದ್ದು ಕೇವಲ 'ಮಠ'.

ಸಂಸ್ಕೃತ ಉಕ್ತಿಗಳನ್ನು ಬಸವಣ್ಣ ಬಳಸಿಕೊಂಡದ್ದು ಕೇವಲ ಒಂದು ತಂತ್ರವಾಗಿತ್ತು. ಒಂದು ವ್ಯವಸ್ಥೆಯನ್ನು ಕಿತ್ತೆಸೆಯಲು ಆ ವ್ಯವಸ್ಥೆಯ ಕೆಲವು ಅಂಶಗಳನ್ನೇ ಸಾಧನವನ್ನಾಗಿ ಮಾಡಿಕೊಳ್ಳುವುದು ಎಲ್ಲಾ ಜನಪರ ಚಳುವಳಿಗಳಲ್ಲೂ ಕಂಡುಬರುವಂತದ್ದಾಗಿದೆ. ಇದಕ್ಕೆ ಶರಣ ಚಳುವಳಿ ಹೊರತಾಗಿಲ್ಲ. ಆದರೆ ೧೨ನೇ ಶತಮಾನದ ನಂತರ ಹಿರೇಮಠರೇ ಹೇಳುವಂತೆ ಕುಮಾರ ಪದ್ಮರಸನಿಂದ ಹಿಡಿದು ಕಾಶಿನಾಥ ಶಾಸ್ತ್ರಿಗಳ ವರೆಗೆ ನಡೆದದ್ದು ಸಂಸ್ಕೃತದ ಸಾರ್ವಭೌಮತ್ವ ಹಾಗೂ ವೈದಿಕೀಕರಣ. ಇದಕ್ಕೆ ಶರಣ ಚಳುವಳಿಯ ಪ್ರೇರಣೆ ಇರಲಿಲ್ಲ. ಈ ಒಂದು 'ಕಾಲದ' ಗೊಂದಲವನ್ನು ಬಿಟ್ಟರೆ ಹಿರೇಮಠರ ಕೆಲವು ತೀರ್ಮಾನಗಳು ಸರಿಯಾಗಿವೆ.

೩

ಹಿರೇಮಠರ ಲೇಖನದಲ್ಲಾಗಿರುವ ಇನ್ನೊಂದು ತಪ್ಪು ಗ್ರಹಿಕೆಯೆಂದರೆ ಅವೈದಿಕ ಸಂಸ್ಕೃತಿ ಕುರಿತದ್ದಾಗಿದೆ.

ಶರಣ ಚಳುವಳಿಯು ಕೆಳಜಾತಿಗಳ ಕೆಲವು ಅರ್ಥರಹಿತ ಆಚರಣೆ, ವಿಧಿಗಳು, ರಿಚುಯಲ್ಲುಗಳು ಮುಂತಾದವುಗಳನ್ನು ವಿರೋಧಿಸಿತೇ ಹೊರತು ಸಾರಸಗಟಾಗಿ ಅವೈದಿಕ ಸಂಸ್ಕೃತಿಯನ್ನಲ್ಲ. ಹಿರೇಮಠರು ಅವೈದಿಕ ಸಂಸ್ಕೃತಿ ಎಂಬುದನ್ನು ಅವೈದಿಕ ವಿಧಿಯಾಚರಣೆ-ರಿಚುಯಲ್ಲುಗಳಿಗೆ ಸಂವಾದಿಯಾಗಿ ಬಳಸಿದಂತೆ ಕಾಣುತ್ತದೆ. ಉದಾ। ದಲಿತ-ಹಿಂದುಳಿದ ಜಾತಿ ಜನರ ಆಹಾರ ಪದ್ಧತಿಯನ್ನು ಶರಣ ಚಳುವಳಿ ವಿರೋಧಿಸಿತು ಎನ್ನುವ ಹಿರೇಮಠರು ಬಸವಣ್ಣನ ಕೆಳಗಿನ ವಚನವನ್ನು ಹೀಗೆ ಅರ್ಥೈಸುತ್ತಾರೆ ?

ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ
ಬಾಯಲ್ಲಿ ಸುರೆಗಡಿಗೆ, ಕೊರಳಲ್ಲಿ ದೇವರಿರಲಿ (ಲಿಂಗವಿರಲಿ)
ಅವರ ಲಿಂಗವೆಂಬೆ, ಸಂಗನೆಂಬೆ,
ಕೂಡಲ ಸಂಗಮ ದೇವಾ, ಅವರ ಮುಖಲಿಂಗಗಳೆಂಬೆ. (ಬ. ವ. ೭೧೯)

ಅವೈದಿಕ ಸಂಸ್ಕೃತಿಯನ್ನು ಶರಣ ಚಳುವಳಿ ಅದರಲ್ಲೂ ಮುಖ್ಯವಾಗಿ ಬಸವಣ್ಣ ವಿರೋಧಿಸಿದ ಎಂಬ ಹಿರೇಮಠರ ತೀರ್ಮಾನಕ್ಕೆ ಬಸಣ್ಣನವರ ೫೫೩ ರಿಂದ ೫೬೧ ರ ವರೆಗಿನ ವಚನಗಳು ಆಧಾರವಾಗಿರುವಂತಿದೆ. ಈ ಎಲ್ಲಾ ವಚನಗಳಲ್ಲೂ ಬಸವಣ್ಣ ಕೆಳಜಾತಿ ವರ್ಗಗಳ ವಿಧಿಯಾಚರಣೆ ಮತ್ತು ಅವುಗಳ ಹಿಂದಿನ ಮೌಢ್ಯ, ಅರ್ಥಹೀನತೆಯನ್ನು ಖಂಡಿಸಿದ್ದಾನೆ. ಸಂಸ್ಕೃತಿಯನ್ನೇ ವಿರೋಧಿಸಿದ್ದಾನೆ ಎಂಬುದು

ದುಡುಕಿನ ತೀರ್ಮಾನ ಎಂದು ನನ್ನ ಭಾವನೆ. ಏಕೆಂದರೆ ಕೆಳಜಾತಿ-ವರ್ಗಗಳಲ್ಲಿ ಆಚರಣೆಯಲ್ಲಿರುವ ಕೆಲವು ಅನಿಷ್ಟಗಳನ್ನು ಇಂದಿಗೂ ವಿರೋಧಿಸುವ ಅವಶ್ಯಕತೆಯನ್ನು ತಳ್ಳಿ ಹಾಕಲು ಬರುವುದಿಲ್ಲ. ಪಾಳೆಗಾರಿಕೆಯು ಪೋಷಿಸಿಕೊಂಡು ಬಂದ ಈ ವರ್ಗದ ಎಲ್ಲಾ ಆಚರಣೆಗಳನ್ನು ಸಮರ್ಥಿಸುವುದು ಹೇಗೆ ? ಕೆಳಜಾತಿ ವರ್ಗಗಳಲ್ಲಿನ ಆಚರಣೆ-ರಿಚುಯಲ್ಲುಗಳ ಬಗೆಗಿನ ಬಸವಣ್ಣನ ಖಂಡನೆಯನ್ನು ಈ ದೃಷ್ಟಿಯಿಂದಲೇ ನೋಡಬೇಕು ಎಂದು ನನ್ನ ಭಾವನೆ.

೪

"ಕೆಳಜಾತಿ–ವರ್ಗದ ಸಂಸ್ಕೃತಿಯನ್ನು ಉಳಿಸಿ ಬೆಳೆಸುತ್ತಲೇ........ಸಮಾನತೆ ಸಾಧಿಸಬೇಕಾಗಿದೆ" ಎಂಬ ಹಿರೇಮಠರ ಯೋಚನೆ ಸರಿಯಾಗೆ ಇದೆ. ಆದರೆ ಆ ವರ್ಗದಲ್ಲಿರುವ ಕೀಳು ಆಚರಣೆ–ಪಾಳೆಗಾರಿಕೆ ಪೋಷಿಸಿಕೊಂಡು ಬಂದಿರುವ ಅನಿಷ್ಟ ಪದ್ಧತಿ, ಕೆಳಜಾತಿ–ವರ್ಗದೊಳಗಿನ ಪಟ್ಟಭದ್ರ" ಯಥಾಸ್ಥಿತಿವಾದವನ್ನು ವಿರೋಧಿಸುವ ಅವಶ್ಯಕತೆ ಇದೆ. ಶರಣ ಚಳುವಳಿಯಲ್ಲಿ 'ಕಾಯಕತತ್ವ' ಇದನ್ನು ಸ್ವಲ್ಪ ಮಟ್ಟಿಗೆ ಮಾಡಿತು ಎಂದು ನನಗನ್ನಿಸುತ್ತದೆ.

ಅವೈದಿಕ ಸಂಸ್ಕೃತಿಯ ಚಲನಶೀಲ ಗುಣಗಳನ್ನು ಗುರುತಿಸುವ ಅವಶ್ಯಕತೆ ಇದೆ, ನಿಜ. ಶರಣ ಚಳುವಳಿಯು ಕೆಳಜಾತಿ-ವರ್ಗಗಳಿಗೆ ಮೇಲ್‌ಚಲನೆ ನೀಡಿತು. ಒಂದು ರೀತಿಯಲ್ಲಿ ಜಡ್ಡುಗಟ್ಟಿದ್ದ ವ್ಯವಸ್ಥೆಗೆ ಶರಣ ಚಳುವಳಿಯು 'ಚಲನೆ' ನೀಡಿತು. ಅದು ಊರ್ಜಿತಗೊಳ್ಳಲಿಲ್ಲವೆಂಬುದೇ ದುರಂತ. ಯಾಕೆ ಊರ್ಜಿತಗೊಳ್ಳಲಿಲ್ಲವೆಂಬುದರ ಚರ್ಚೆ ಇಲ್ಲಿ ಅಪ್ರಸ್ತುತ. ಆದರೆ ಪರ್ಯಾಯ ಸಂಸ್ಕೃತಿಯೊಂದರ ರಚನೆಗೆ ಚಳುವಳಿ ಪ್ರಯತ್ನಿಸಿತು ಎಂಬುದನ್ನು ಅದರೊಳಗಿನ ಎಲ್ಲ ಮಿತಿಯೊಳಗೆ ಒಪ್ಪಿಸಿಕೊಳ್ಳಬೇಕು.

ಶರಣ ಚಳುವಳಿಯ ಸಂದರ್ಭದಲ್ಲಿ ವಿವಿಧ ಮಟ್ಟದಲ್ಲಿ ಸಂಘರ್ಷ ನಡೆಯಿತು ಎಂಬುದು ಮುಖ್ಯ.

೧ ಅಲ್ಲಿ ನಡೆದದ್ದು ಶರಣ ಸಂಸ್ಕೃತಿ ಹಾಗೂ ವೈದಿಕ ಸಂಸ್ಕೃತಿಯ ನಡುವಿನ ಸಂಘರ್ಷ.

೨ ಶರಣ ಸಂವಿಧಾನದೊಳಗೆ ಕೆಳವರ್ಗ-ಮೇಲುವರ್ಗದ ಸಂಸ್ಕೃತಿಯೊಳಗಿನ ಸಂಘರ್ಷ.

೩ ಶರಣ ಸಂವಿಧಾನದೊಳಗೆ ಪುರುಷ ಪ್ರಧಾನ ಹಾಗೂ ಹೆಣ್ಣಿನ ಅನನ್ಯತೆ ಸ್ಥಾಪಿಸುವುದರ ನಡುವಿನ ಸಂಘರ್ಷವಿದೆ.

ಈ ರೀತಿಯ ಸಂಘರ್ಷ–ಚಳುವಳಿಗಳು ತಾರ್ಕಿಕ ನೆಲೆಯನ್ನು ಮುಟ್ಟಲಿಲ್ಲ ಎಂಬುದರ ಬಗ್ಗೆ ಚರ್ಚೆ ನಡೆಯುವುದು ಅಪೇಕ್ಷಣೀಯ.

೫

ಎಸ್. ಎಸ್. ಹಿರೇಮಠರು "ಜೀವವಿರೋಧಿಯಾದ ಅನೇಕ ವೈದಿಕ ಆಧ್ಯಾತ್ಮಿಕ ಅಂಶಗಳನ್ನು ಶರಣರು ವೀರಶೈವ ತತ್ವಜ್ಞಾನದಲ್ಲಿ ತುರುಕುತ್ತಾರೆ" ಎನ್ನುತ್ತಾರೆ. ಇದಕ್ಕೆ ಅವರು ಕರ್ಮ ಸಿದ್ಧಾಂತದ ಉದಾಹರಣೆ ನೀಡುತ್ತಾರೆ. ಕರ್ಮ ಸಿದ್ಧಾಂತವನ್ನು ೧೨ನೇ ಶತಮಾನದ ಶರಣ ಚಳುವಳಿ ಒಂದು ನೆಲೆಯಲ್ಲಿ ವಿರೋಧಿಸಿತು. ತದನಂತರ ಮಾತ್ರ ಕರ್ಮಸಿದ್ಧಾಂತವನ್ನು ವೀರಶೈವ ತಬ್ಬಿಕೊಂಡಿತು.

ಕರ್ಮಸಿದ್ಧಾಂತದ ಬಗ್ಗೆ ಬಸವಣ್ಣನ ಗೊಂದಲವನ್ನೇ ನೋಡಬಹುದು.

ಸುಖ ಬಂದಡೆ ಪುಣ್ಯದ ಫಲವೆನ್ನೆನು,
ದುಃಖ ಬಂದಡೆ ಪಾಪದ ಫಲವೆನ್ನೆನು,
..............................
..............................
ಸಂಸಾರದ ಸವೆಯ ಬಳಸುವೆನು. (ಬ. ವ. ೬೯೪)

ಹೀಗೆ ಗಟ್ಟಿಯಾಗಿ ಭೌತಿಕತೆ–ಲೌಕಿಕತೆಯನ್ನು ಮಾತನಾಡುವ ಬಸವಣ್ಣ ಇನ್ನೊಂದು ಕಡೆ 'ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ' (ಬ. ವ. ೧೩) ಎನ್ನುತ್ತಾನೆ. 'ಇಂದಿನ ಭೋಗವು ಕೈಯ ಮೇಲೆ' (ಬ. ವ. ೧೭೦) ಅನ್ನುವ ಬಸವಣ್ಣ ಅದೇ ಉಸುರಲ್ಲಿ 'ಸಂಸಾರ ಶರಧಿಯ ದಾಟಿಸಿ ಕಾಯೋ' (ಬ. ವ. ೧೦೧೧) ಎನ್ನುತ್ತಾನೆ. ಭೌತಿಕತೆ ಬಗ್ಗೆ ಬಸವಣ್ಣನಿಗೆ ಒಲುವಿದೆ. ಆದರೆ ಅವನನ್ನು ಪಾರಮಾರ್ಥಿಕ-ಆಧ್ಯಾತ್ಮಿಕತೆಯ ಸೆಳವು ಬಿಟ್ಟಿಲ್ಲ. ಇದಕ್ಕೆ ಬಸವಣ್ಣನ ವೈದಿಕ ಮೂಲವೇ ಕಾರಣವಾಗಿದ್ದಿರಬಹುದು,

೬

ಶರಣ ಚಳುವಳಿಯನ್ನು ೧೨ ನೇ ಶತಮಾನದಿಂದ ನಿರಂತರವಾಗಿ ಇಂದಿನವರೆಗೆ ಹರಿದು ಬಂದ ಒಂದು 'ಅಖಂಡ ಚಳುವಳಿ' ಎಂಬ ಎಸ್. ಎಸ್. ಹಿರೇಮಠರ ಊಹೆಯ ಕಾರಣದಿಂದಾಗಿಯೇ ಅವರು ಆದಿಕಾಲದ ವೈದಿಕ, ಮಧ್ಯಕಾಲದ ಬ್ರಾಹ್ಮಣ, ಆಧುನಿಕ 'ಹಿಂದು' ವಾದಗಳ ಬ್ರಾಹ್ಮಣ–ವೈದಿಕ ಪರಂಪರೆಯಲ್ಲಿ ಲಿಂಗಾಯತವೂ ಸೇರಿ ಹೋಗುವುದಕ್ಕೆ ಶರಣ ಚಳುವಳಿಯ ಕಾಣಿಕೆಯೂ ಅಪಾರ ಎಂಬ ತೀರ್ಮಾನಕ್ಕೆ ಬಂದು ಬಿಡುತ್ತಾರೆ. ಇಂತಹ ತೀರ್ಮಾನವು ಶರಣ ಚಳುವಳಿಗೆ ಪೂರ್ಣ ನ್ಯಾಯ ಒದಗಿಸುವುದಿಲ್ಲ ಎಂದು ನನಗನ್ನಿಸುತ್ತದೆ. ೧೨ ನೇ ಶತಮಾನದ ಕಾಲಘಟ್ಟದಲ್ಲಿ ಶರಣ ಸಂಸ್ಕೃತಿಯು ತನ್ನೆಲ್ಲಾ ಮಿತಿಯೊಳಗೆ ವ್ಯವಸ್ಥೆಗೆ ನೀಡಿದ ಶಾಕ್ ಅಥವಾ ಚಾಲನೆ ಕಡೆಗಣಿಸುವಂತಹುದಲ್ಲ.

ಟಿ. ಆರ್. ಚಂದ್ರಶೇಖರ, ಹೊಸಪೇಟೆ

# ಪ್ರತಿಕ್ರಿಯೆ : ಮೂರು

ಬಂಡಾಯ ಧೋರಣೆಯು, ವೈದಿಕ ಸಂಸ್ಕೃತಿಯ ಸಾಮಾಜಿಕ ಪರಿಣಾಮವನ್ನು ಸರಿಯಾಗಿ ಗುರುತಿಸುತ್ತಿರುವ ಎಸ್. ಎಸ್. ಹಿರೇಮಠರ ಲೇಖನ ಕೆಲವು ಸರಿಯಲ್ಲದ ಗ್ರಹಿಕೆಗಳಿಂದಲೂ, ಅವಸರದ ತೀರ್ಮಾನಗಳಿಂದಲೂ ಕೂಡಿದೆ. ಪ್ರಸ್ತುತವಾಗಿ ನಾನು ಪ್ರತಿಕ್ರಿಯಿಸುತ್ತಿರುವ ವಿಚಾರಗಳ ಸ್ಪಷ್ಟೀಕರಣಕ್ಕಾಗಿ ಶರಣ ಚಳುವಳಿಯಲ್ಲಿ ಮೂರು ಸ್ತರಗಳನ್ನು ಗುರುತಿಸಿದ್ದೇನೆ.

೧ ವಚನಪೂರ್ವ ಯುಗ

೨ ವಚನ ಯುಗ

೩ ವಚನೋತ್ತರ ಯುಗ

ಶರಣ ಚಳವಳಿ ವಚನಗಳಲ್ಲೇ ಹೊಡಕರಿಸಿರುವುದರಿಂದ ಮೇಲಿನ ವಿಂಗಡನೆ ಪ್ರಾಸಂಗಿಕವಾಗಿ ಸರಿಯೆನಿಸಬಹುದಾಗಿದೆ.

ವಚನ ಪೂರ್ವ ಯುಗದಲ್ಲಿದ್ದ ವೈದಿಕ ಸಂಸ್ಕೃತಿಯ ದಟ್ಟವಾದ ಮತ್ತು ಅರ್ಥರಹಿತ ನಂಬಿಕೆ-ಆಚರಣೆಗಳು, ವರ್ಣನೀತಿಯ ಯಥೇಚ್ಛತೆ. ಹಾಗೂ ಇದರಿಂದ ಸಾಮಾಜಿಕವಾಗಿ ಆಗುತ್ತಿದ್ದ ಸಾಂಸ್ಕೃತಿಕ ನಷ್ಟಗಳನ್ನು ಕಂಡಿದ್ದರಿಂದಲೇ ಶರಣರು ತಮ್ಮ ಯುಗದ ಬದುಕನ್ನು ವೈಜ್ಞಾನಿಕವಾಗಿ ಕಾಣಲು ಕ್ರಾಂತಿಕಾರಕ ವಿಚಾರಗಳಿಗೆ ಮತ್ತು ದೃಷ್ಟಿಕೋನಗಳಿಗೆ ಕ್ರಿಯಾತ್ಮಕವಾಗಿ ತೊಡಗಿದರು. ಪ್ರಾಯೋಗಿಕವಾಗಿಯೂ ಅಂಥ ಬದುಕನ್ನೇ ಬದುಕಿದ್ದು ವಚನಗಳಿಂದ ತಿಳಿಯುತ್ತದೆ. ಮಾರ್ಗ ಸಂಸ್ಕೃತಿಯಲ್ಲಿದ್ದ ಸಂಪ್ರದಾಯಗಳನ್ನು, ನಂಬಿಕೆಗಳನ್ನು ಸಮಾಜದ 'ಕೆಳಸ್ತರ'ದ ಮುಂದಿರಿಸಿ ಅವುಗಳಲ್ಲಿದ್ದ ಸ್ವಾರ್ಥನೆಲೆಯನ್ನು ಸ್ಪಷ್ಟಪಡಿಸಿದರು. ಇಲ್ಲಿ ಒಂದು ಮಾತನ್ನು ಗಮನಿಸಬೇಕು. ಮಾರ್ಗನೀತಿಯನ್ನು ಅಲ್ಲಗಳೆದರು ಎಂದರೆ ದೇಶೀಯವಾದ ಎಲ್ಲಾ ಸಂಪ್ರದಾಯ- ಆಚರಣೆಗಳನ್ನು ಒಪ್ಪಿಕೊಂಡರು ಎಂದು ಅರ್ಥವಲ್ಲ. ಅಲ್ಲಿಯೂ ಇದ್ದಿರಬಹುದಾದ ಅಥವಾ ಇದ್ದ ಅವೈಜ್ಞಾನಿಕವಾದ, ಪೂರ್ವಗ್ರಹೀತವಾದ ಭಾವನೆಗಳನ್ನು ಪರಿಷ್ಕರಿಸಿದರು. ಅವುಗಳನ್ನು ಪರಿಷ್ಕರಿಸುವುದೂ ಸಹಾ ಶರಣ ಸಂಸ್ಕೃತಿಯ ಒಂದು ಕೆಲಸವಾಗಿತ್ತು. ದೇಶೀಯ ಮೂಲದಲ್ಲಿ ಇದ್ದಿರಬಹುದಾದ ಅಥವಾ ಇದ್ದ ಈ ನೆಲೆಗೆ ವೈದಿಕ ಸಂಸ್ಕೃತಿಯ 'ಕಪಿಮುಷ್ಠಿಯ ಪ್ರಾಬಲ್ಯ'ವೇ ಕಾರಣವೆನ್ನಬಹುದು. ಬಹುಶಃ ಈ ಕಾರಣವಾಗಿ ಭಕ್ತ-ಭವಿಯ ದ್ವೈವಿಕ ಕಲ್ಪನೆ ಶರಣ ಸಂಸ್ಕೃತಿಯ ಪ್ರಾಯೋಗಿಕ ಸೂತ್ರವಾಗಿದೆ, 'ಭಕ್ತ-ಭವಿ'ಯ ದ್ವೈವಿಕ ಕಲ್ಪನೆಗೆ ಒಪ್ಪಿದ್ದ ಅಂದಿನ ಒಟ್ಟು ವೀರಶೈವ ಸಮಾಜದಲ್ಲಿ ಸಂಕುಚಿತವಾದ ವಿರೋಧಿ ಗುಣವನ್ನು ಹುಡುಕುವುದು ಸರಿಯೆನಿಸದು.

ವಚನೋತ್ತರ ಯುಗದಲ್ಲಿ ಅಂದರೆ ಬಸವ-ಅಲ್ಲಮ ಮುಂತಾದವರು 'ಐಕ್ಯ'ರಾದ ನಂತರ ಅವರ ಚಿಂತನೆಗಳು, ಅವರ ಸಮಾಜದ ಕಲ್ಪನೆ, ಅವರ ಧರ್ಮಗಳು ತಾತ್ವಿಕವಾಗಿ ಉಳಿದವೇ ವಿನಾ ಹನ್ನೆರಡನೇ ಶತಮಾನದಲ್ಲಿದ್ದಂತೆ ಪ್ರಾಯೋಗಿಕ ವಾಗಿರಲಿಲ್ಲ. ಇದಕ್ಕೆ ಬಹುಶಃ ಸಮರ್ಥ ಮಾರ್ಗದರ್ಶನದ ಕೊರತೆ ಕಾರಣವಿರಬ ಹುದು ಎನಿಸುತ್ತದೆ. ಅಲ್ಲದೆ,ಒಂದೇ ಕಾಲದಲ್ಲಿ, ಒಂದೇ ನಾಡಿನಲ್ಲಿ 'ಒಂದು ಸಾಮಾ ಜಿಕ ಚಿಂತನೆಯ ಗುಂಪು ವೈದಿಕ ಸಂಸ್ಕೃತಿಯನ್ನು ಸರಿಸಿ ವಚನ (ಅಥವಾ ಶರಣ) ಸಂಸ್ಕೃತಿ ಸ್ಥಾಪಿಸುವ ಕೆಲಸ ಮಾಡಿತ್ತು. ವರ್ಣಾಶ್ರಮ ಧರ್ಮವನ್ನು ಒಪ್ಪದ, ಯಜ್ಞ ಯಾಗಾದಿಗಳಿಗೆ ಬೆಲೆಯನ್ನು ಕೊಡದ, ಅಗ್ನಿಪೂಜೆಯನ್ನು ನಿರಾಕರಿಸುವ ಶರಣರು 'ಸಾಂಪ್ರದಾಯಿಕ' ವೈದಿಕ ಧರ್ಮವನ್ನು ಪಲ್ಲಟಗೊಳಿಸುವ ಕೆಲಸ ನಿರ್ವ ಹಿಸಿದ್ದರು. ಆದರೆ ಇದರ ಸಮರ್ಥ ಪರಂಪರೆಗೆ ಹನ್ನೆರಡನೇ ಶತಮಾನವಷ್ಟೇ ಸೀಮಿ ತವಾಗಿ ಕ್ರಮೇಣ ತಾತ್ವಿಕ ಪರಂಪರೆಯನ್ನು ಮಾತ್ರ ಪಡೆಯಿತು. ವೈದಿಕ ಧರ್ಮದ ಪ್ರಾಬಲ್ಯಕ್ಕೆ ಮಣಿದು ಆಧ್ಯಾತ್ಮಿಕ ವೈದಿಕ ಪರಂಪರೆ ಮತ್ತು ದಲಿತ ವಿರೋಧಿ ನಿಲುವಿಗೆ ತೊಡಗಿತು. ಪ್ರೌಢದೇವರಾಯನಂಥ ರಾಜತ್ವದ ನೆರಳಿನಲ್ಲಿ ಬದುಕ ಬೇಕಾಗಿ ಬಂದು ಸೂತ್ರ, ರಹಸ್ಯ, ಅಷ್ಟವಿಧ, ದೀಕ್ಷೆ ಮುಂತಾದ ಸೂತ್ರಗಳಿಗೆ ತೊಡಗಿತು. ಹಿರೇಮಠರು ಶರಣ ಚಳುವಳಿಯಲ್ಲಿ ಕಂಡುಕೊಂಡ 'ನಿಜ ಸ್ವರೂಪ' ಇಲ್ಲಿದೆ. ಮತ್ತು ಇಲ್ಲಿಂದ ಪ್ರಾರಂಭವಾಗಿದೆ.

ಪ್ರಾಚೀನ ಕಾಲದಿಂದಲೂ ವೈದಿಕ ಧರ್ಮ ತನ್ನ ವಿರುದ್ಧ ಯಾವುದೇ ಧಾರ್ಮಿಕ ಪ್ರತಿಭಟನೆಗೆ ಅನುವು ಮಾಡಿಕೊಡುತ್ತಿರಲಿಲ್ಲ. ಅದು ಆ ಪ್ರತಿಭಟನೆಯನ್ನು ತನ್ನಲ್ಲಿ ಅರಗಿಸಿಕೊಳ್ಳುವಷ್ಟು "ಬೆಳೆದು" ನಿಂತಿತ್ತು. ವಚನಕಾರರ ಚಳವಳಿ (ಅಥವಾ ವೀರ ಶೈವ ಧರ್ಮ) ಹನ್ನೆರಡನೇ ಶತಮಾನದಲ್ಲಿ ಕ್ರಾಂತಿಕಾರಕ, ವೈಜ್ಞಾನಿಕ ತಳಹದಿ ಯಲ್ಲಿ ತಾತ್ವಿಕ-ಪ್ರಾಯೋಗಿಕ ನಡೆ-ನುಡಿಗಳಿಂದ ಅದನ್ನು ಹಿಮ್ಮೆಟ್ಟಿಸಿತ್ತಾದರೂ ಮುಂದೆ ಆಚರಣೆ, ಪ್ರಯೋಗಗಳಲ್ಲಿ ವೈದಿಕವನ್ನೇ ಮೊರೆ ಹೊಕ್ಕಿದ್ದು ಐತಿಹಾಸಿಕ ಸತ್ಯ. ಮೂರ್ತಿ ಪೂಜೆ, ವ್ಯಕ್ತಿ ಪೂಜೆಯನ್ನು ಅಲ್ಲಗಳೆದ ವಚನಕಾರರನ್ನೇ ಇಂದು ಪೂಜಿಸಿ, ಮೆರವಣಿಗೆ ಮಾಡುತ್ತಿರುವುದು ಮೇಲಿನ ಮಾತಿಗೆ ಪುಷ್ಟಿ ನೀಡುತ್ತದೆ' ಇಂಥ ಸಂದರ್ಭಗಳಲ್ಲೇ ದಲಿತ ವಿರೋಧಿ, ಆಧ್ಯಾತ್ಮಿಕ ವೈದಿಕ ಪರಂಪರೆಗಳು ಮೂಡಿ ಬಂದವು.

ಹಿರೇಮಠರು ಊಹಿಸಿರುವ ಶರಣ ಚಳವಳಿಯ 'ನಿಜಸ್ವರೂಪ' ವಚನಯುಗದಲ್ಲಿರದೆ, ವಚನೋತ್ತರ ಯುಗದಲ್ಲಿದೆ. ವಚನ ಯುಗದಲ್ಲಿ 'ಒಂದೇ' ಆಗಿದ್ದ ಮಾತು-ಕೃತಿ, ನಡೆ-ನುಡಿಗಳು ವಚನೋತ್ತರ ಯುಗದಲ್ಲಿ ದ್ವಂದ್ವವನ್ನು ಅನುಭವಿಸಿವೆ. ಇದರ

ಪರಿಣಾಮವಾಗಿಯೇ ದಲಿತ ವಿರೋಧಿ ಮತ್ತು ವೈದಿಕ ಆಧ್ಯಾತ್ಮಿಕ ಚಿಂತನೆಗಳು ಹುಟ್ಟಿಕೊಂಡವು. ಅದೂ ವೈದಿಕತೆಯ ಪ್ರಭಾವದಿಂದ. ಆದರೆ ಹಿರೇಮಠರು ಊಹಿಸಿರುವಂತೆ ಯಥಾವತ್ತಾಗಿ ಅಲ್ಲ.

ಇಲ್ಲಿ ಮತ್ತೊಂದು ಅಂಶ:

ಶೈವವನ್ನು ಪರಿಷ್ಕರಿಸಿ, ವೈದಿಕವನ್ನು ಸಮಾಜದಿಂದ ಸಂಪೂರ್ಣವಾಗಿ ದೂರವಿಡಲು ಮಾಡಿದ ಶರಣ ಚಳವಳಿಗೆ ಹನ್ನೆರಡನೇ ಶತಮಾನವಿನ್ನೂ ಪ್ರಾರಂಭದ ಹಂತವಾಗಿದೆ. ಶರಣ ಚಳವಳಿಗೆ ಹನ್ನೆರಡನೇ ಶತಮಾನದಲ್ಲಿ ಯಾವುದೇ ಐತಿಹಾಸಿಕ ಬೆಂಬಲ ವಿದ್ದಿಲ್ಲ. ಅದಕ್ಕೆ ಬದಲಾಗಿ ಈಗಾಗಲೇ ಬೇರೂರಿದ್ದ ವಿರೋಧಗಳ ಮಧ್ಯೆ ಅದನ್ನು ಸಾಧಿಸಬೇಕಾಗಿತ್ತು. ಇಂದು ಶರಣ ಚಳವಳಿಗೆ ಸಂಬಂಧಿಸಿದಂತೆ ವಿಚಾರ ಮಾಡಲು ಸು. ೮೦೦ ವರ್ಷಗಳ ಚರಿತ್ರೆ ಕಣ್ಣ ಮುಂದಿದೆ; ಇಂಥ ಸಂದರ್ಭದಲ್ಲಿ ಸಾಮಾಜಿಕ ಪರಿಸರಗಳ, ಸಮತೋಲನಗಳ ತೌಲನಿಕ ಅಧ್ಯಯನವೂ ಇಂಥ ಬರೆಹಗಳಿಗೆ ಮುಖ್ಯ ವಾಗುತ್ತದೆ. ಆದ್ದರಿಂದ ಶರಣ ಚಳವಳಿಯ ಅಂತರ್ಯದಲ್ಲಿ ವೈದಿಕ ಧರ್ಮಗಳ ಉದ್ದೇಶಗಳೇ ಇವೆ; ಅಥವಾ ವೈದಿಕರ ಅನುಬಂಧವಾಗಿ ಶರಣರ ಚಳುವಳಿ ಕೆಳ ವರ್ಗದ ಮೇಲೆ ಧಾರ್ಮಿಕ ಒತ್ತಡವನ್ನು ತಂದಿತು ಮತ್ತು ಅದೇ ಅದರ 'ನಿಜ ಸ್ವರೂಪ'ವೆಂದು ತೀರ್ಮಾನಿಸಿರುವುದು ಹಿರೇಮಠರ ಯುಗಧರ್ಮಗಳ ತೌಲನಿಕ ಚಿಂತನೆಯ ಅವಸರದ ನಿರ್ಧಾರವೆನಿಸುತ್ತದೆ.

**ಮೃತ್ಯುಂಜಯರು ಮಾಲೆ, ಹೊಸಪೇಟೆ**

## ಪ್ರತಿಕ್ರಿಯೆ: ನಾಲ್ಕು

ಎಸ್. ಎಸ್. ಹಿರೇಮಠ ಅವರ 'ಶರಣ ಚಳುವಳಿಯ ನಿಜ ಸ್ವರೂಪ' ಎಂಬ ಲೇಖನಕ್ಕೆ ಸಂಬಂಧಿಸಿದಂತೆ ಪ್ರತಿಕ್ರಿಯೆಯಾಗಿ ಈ ಮಾತು. ವಚನ ಚಳುವಳಿಯ ನೇತ್ಯಾತ್ಮಕ ಸಂಗತಿಗಳತ್ತ ಗಮನ ಸೆಳೆಯಲು ಹೊರಟಿರುವ ಹಿರೇಮಠ ಅವರು, ಈ ಚಳುವಳಿ ದಲಿತ ವಿರೋಧಿಯಾಗಿದೆ ಹಾಗೂ ವೈದಿಕ ಪರಂಪರೆಯ ಆಧ್ಯಾತ್ಮವನ್ನು ಸಮರ್ಥಿಸುತ್ತದೆಂದು ಸಾಧಿಸಲು ಪ್ರಯತ್ನಿಸಿದ್ದಾರೆ. ಆದರೆ ಇದು ವ್ಯರ್ಥ ಪ್ರಯತ್ನ ವಾಗಿದೆಯೇ ಹೊರತು ನಿಜವಾದ ಒಳನೋಟಗಳನ್ನು ಪ್ರಕಟಿಸುವುದಿಲ್ಲ. ವಚನ ಚಳುವಳಿಯನ್ನೇ ದಲಿತ ವಿರೋಧಿ ಚಳುವಳಿಯೆಂದು ಕರೆದರೆ, ಈ ನಾಡಿನಲ್ಲಿ ದಲಿತ ಪರ ಚಳುವಳಿಯಾದರೂ ಯಾವುದು ? ವೈದಿಕ ಮತದಲ್ಲಿ ಹುಟ್ಟಿ, ಆ ಮತದ ಗೊಡ್ಡುತನವನ್ನು ತಿರಸ್ಕರಿಸಿದ ಬಸವಣ್ಣ ದಲಿತನಾಗಿ ಬೆಳೆದು ನಿಲ್ಲುವ ಸೂಕ್ಷ್ಮವನ್ನು ಹಿರೇಮಠರು ಏಕೆ ಗಮನಿಸಲಿಲ್ಲವೆಂಬುದೇ ಆಶ್ಚರ್ಯವಾಗುತ್ತದೆ. ದಲಿತರ ಬಗೆಗೆ ಮೊದಲ ದನಿಯೆತ್ತಿದ ವಚನ ಚಳುವಳಿ, ಸಮಾನತೆಗಾಗಿಯೇ ಹೋರಾಟ ಮಾಡಿದ್ದನ್ನು ಇತಿಹಾಸದಿಂದ ಮರೆಮಾಚುವುದು ಸಾಧ್ಯವಿಲ್ಲ.

"ದಲಿತರು ಮತ್ತು ಕೆಳಜಾತಿಗಳ ಜನರು ಆರಾಧಿಸುವ ದೇವರುಗಳನ್ನು ಕಟುವಾಗಿ ಟೀಕಿಸುವಲ್ಲಿ ಶರಣರ ದಲಿತ ವಿರೋಧಿತ್ವ ವ್ಯಕ್ತವಾಗುವುದ"ೆಂದು ಹಿರೇಮಠರು ಆರೋಪಿಸಿದ್ದಾರೆ. ವಚನಕಾರರು ಬಹುದೇವೋಪಾಸನೆಯಿಂದ ಏಕದೇವೋಪಾಸನೆಯ ಕಡೆಗೆ ಅದರಲ್ಲೂ ಇಷ್ಟಲಿಂಗಕ್ಕೆ ಪ್ರಾಮುಖ್ಯತೆ ಕೊಟ್ಟ ಮುಖ್ಯಕಾರಣವೆಂದರೆ, ಪೂಜಾರಿ-ದೇವಾಲಯಗಳಲ್ಲಿ ನಡೆಯುತ್ತಿರುವ ಶೋಷಣೆಯನ್ನು ತಪ್ಪಿಸುವುದಾಗಿತ್ತೇ ಹೊರತು, ದಲಿತರ ಸಂಸ್ಕೃತಿಯನ್ನು ನಾಶಗೊಳಿಸುವದಾಗಿರಲಿಲ್ಲ. ಬಹುದೇವೋಪಾಸನೆಯನ್ನು ಯಾರೇ ಮಾಡಲಿ, ಮೂಢನಂಬಿಕೆ-ಅಂಧ ಸಂಪ್ರದಾಯಗಳಲ್ಲಿ ಯಾರೇ ಮುಳುಗಿರಲಿ, ಅಂತವರ ನಿಲುವುಗಳನ್ನು ವಚನಕಾರರು ಖಂಡಿಸಿದರೇ ಹೊರತು, ಅವೈದಿಕ ಪರಂಪರೆಯ ವಿಶೇಷತೆಗಳನ್ನು ಅವರು ಅಲ್ಲಗಳೆಯಲಿಲ್ಲ. ಹಾಗೆ ನೋಡಿದರೆ ಅವೈದಿಕ ಪರಂಪರೆಯನ್ನು (ದ್ರಾವಿಡ ಪರಂಪರೆ) ಮತ್ತೊಮ್ಮೆ ಅಧಿಕೃತವಾಗಿ ಸ್ಥಾಪಿಸಿದವರೇ ವಚನಕಾರರು. ದಲಿತ-ಕೆಳಜಾತಿಯಲ್ಲಿ ಸ್ತ್ರೀ-ಪುರುಷರಿಬ್ಬರೂ ಪುರೋಹಿತರಾಗಬಲ್ಲವರಾಗಿದ್ದರೆಂದು ಹೆಮ್ಮೆ ಪಡುವ ಹಿರೇಮಠರು, ವಚನ ಚಳುವಳಿಯ ಮುಖ್ಯ ಉದ್ದೇಶವೇ ಪುರೋಹಿತಶಾಹಿಯನ್ನು ಅಲ್ಲಗಳೆಯುವದಾಗಿತ್ತೆಂಬುದನ್ನು ಮರೆಯುತ್ತಾರೆ. ಪುರೋಹಿತಶಾಹಿಯನ್ನೇ ವಿರೋಧಿಸಿದಾಗ, ಅವರಲ್ಲಿ ಸ್ತ್ರೀಯರು ಪುರೋಹಿತರಾಗಬೇಕೆಂದು ಬಯಸುವುದು ಯಾವ ಔಚಿತ್ಯ? ಹಾಗೆ ನೋಡಿದರೆ ಪುರುಷರಿಗೆ ಸರಿಸಮಾನರಾಗಿ, ಕೆಲವೊಂದು ಸಂದರ್ಭದಲ್ಲಿ ಪುರುಷರನ್ನೂ ಮೀರಿಸುವ ವಚನಕಾರ್ತಿಯರು ವಚನ ಚಳುವಳಿಯ ಮೂಲಕ ಬಂದರು. ಅಕ್ಕಮಹಾದೇವಿ, ಮುಕ್ತಾಯಕ್ಕ, ಮೋಳಿಗೆ ಮಾರಮ್ಮ, ಆಯ್ದಕ್ಕಿ ಲಕ್ಕಮ್ಮ, ಕಾಳವ್ವೆ, ಗೊಗ್ಗವ್ವೆಯಂತಹ ಮಹಿಳೆಯರು ಕೇವಲ ವಚನಕಾರ್ತಿಯರಷ್ಟೇ ಆಗಿರಲಿಲ್ಲ, ಅನುಭವ ಮಂಟಪದ ಪ್ರಮುಖ ಅಂಗವಾಗಿದ್ದರು, ಚಳವಳಿಯ ಮುಖ್ಯ ಪ್ರವಾಹವಾಗಿದ್ದರೆಂಬುದನ್ನು ಮರೆಯುವಂತಿಲ್ಲ.

"ಹೊಲಸು ತಿನ್ನುವವ ಹೊಲೆಯ" ಎಂಬ ಬಸವಣ್ಣನವರ ವಚನವೊಂದರ ಸಾಲನ್ನು ಉದಾಹರಿಸುತ್ತ ಹಿರೇಮಠರು ಅದರರ್ಥವನ್ನು ತಪ್ಪಾಗಿ ಗ್ರಹಿಸಿದ್ದಾರೆನಿಸುತ್ತದೆ. 'ಹೊಲಸು' ಎಂದರೆ ಮಾಂಸವೆಂದರ್ಥವಲ್ಲ. ಅದು ಅನೀತಿ-ಅನ್ಯಾಯದಿಂದ ಬಂದ ಪದಾರ್ಥವೂ ಆಗಿರಬಹುದು. ಅಂತಹ ಅನೀತಿಯುಳ್ಳವರಿಗೆ-ಭ್ರಷ್ಟರಿಗೆ ಶರಣರು ಹೊಲೆಯರೆಂದು ಕರೆದರೇ ಹೊರತು, ಪ್ರಾಮಾಣಿಕವಾಗಿರುವ ದಲಿತರಿಗಲ್ಲ. "ಬಸವಣ್ಣ ಆಚಾರದ ಮಟ್ಟದಲ್ಲಿ ಹೊಲೆಮಾದಿಗರ ಕಾಯಕವನ್ನೇನೂ ಮಾಡುವುದಿಲ್ಲ" ಎನ್ನುವ ಹಿರೇಮಠರು ಅಂದಿನ ಸಂದರ್ಭವನ್ನು ಗ್ರಹಿಸಬೇಕು. ಎಲ್ಲ ಕಾಯಕಗಳಿಗೂ ಸಮಾನ ಗೌರವವನ್ನು ಒದಗಿಸಿಕೊಟ್ಟ ಪ್ರಮುಖರೆಂದರೆ ವಚನಕಾರರು. ಪ್ರತಿಯೊಂದು ಕಾಯಕಕ್ಕೂ ಅಷ್ಟೇ ಗೌರವ ದೊರೆತಾಗ ತಾವು ಮಾಡುತ್ತಿದ್ದ ಕಾಯಕ

ವನ್ನು ಬಿಟ್ಟು ಮತ್ತೊಂದು ಕಾಯಕವನ್ನು ಮಾಡಬೇಕಾದ ಅಗತ್ಯವಿರಲಿಲ್ಲ. ಬಸವಣ್ಣ ದಲಿತರನ್ನೆಂದೂ ಹೊಲೆ–ಮಾದಿಗರೆಂದು ಭಾವಿಸಲಿಲ್ಲ, ಅವರು ಕೀಳೆಂದು ಕಡೆಗಣಿಸಲಿಲ್ಲ. ವಸ್ತುಸ್ಥಿತಿ ಹೀಗಿರುವಾಗ ವಚನ ಚಳುವಳಿ ದಲಿತ ವಿರೋಧಿಯಾಗಿತ್ತೆಂದು ಭಾವಿಸುವುದು, ಬಸವಣ್ಣ ಹೊಲೆಮಾದಿಗರ ಕಾಯಕವನ್ನೇನೂ ಮಾಡುವುದಿಲ್ಲವೆನ್ನುವುದು ಮೊಸರಿನಲ್ಲಿ ಕಲ್ಲು ಹುಡುಕುವ ಪ್ರಯತ್ನವಾಗುವುದಿಲ್ಲವೆ? ಬಹಳ ಮುಖ್ಯವಾದ ಒಂದು ವಿಷಯವೆಂದರೆ ವಚನ ಚಳುವಳಿಯಲ್ಲಿ ದಲಿತರ ವಿಮೋಚನೆಗಾಗಿ ಹೋರಾಡಿದವರು, ಮಾತಾಡಿದವರು ದಲಿತ ವಚನಕಾರರಲ್ಲ, ದಲಿತೇತರ ವಚನಕಾರರೆಂಬುದನ್ನು ಗಮನಿಸಬೇಕು. (ವಿವರಗಳಿಗೆ ನೋಡಿ-ಡಾ. ಸಿದ್ದಲಿಂಗಯ್ಯ "ವಚನ ಚಳುವಳಿ ಮತ್ತು ದಲಿತರು"–'ವಚನ ಸಾಹಿತ್ಯ ವಿಮೋಚನೆ' ಪುಟ:೬೭ ಕ. ವಿ. ವಿ. ಧಾರವಾಡ.) "ಅಸ್ಪೃಶ್ಯತೆಯನ್ನು ಬಸವಣ್ಣ ದಲಿತ ವಚನಕಾರರಿಗಿಂತ ಉಗ್ರವಾಗಿ ಪ್ರತಿಭಟಿಸಿದನು" ಎನ್ನುವ ಡಾ. ಸಿದ್ಧಲಿಂಗಯ್ಯನವರಂತಹ ದಲಿತ ಸಾಹಿತಿಗಳ ವಿಚಾರಸರಣಿಯನ್ನು ಹಿರೇಮಠರು ಗಮನಿಸಬೇಕು. ಚೆನ್ನಯ್ಯನನ್ನು ಅಪ್ಪನೆಂದ, ಕಕ್ಕಯ್ಯನನ್ನು ಬೊಪ್ಪನೆಂದ, ಕಿನ್ನರ ಬೊಮ್ಮಯ್ಯನನ್ನು ಅಣ್ಣನೆಂದ ಬಸವಣ್ಣನನ್ನು, ಕಕ್ಕಯ್ಯನ ಮನೆಯಲ್ಲಿ ಚೆನ್ನಯ್ಯ ದಾಸಯ್ಯರ ಮನೆಯಲ್ಲಿ ಭಕ್ತಿ ಭಿಕ್ಷೆಯನ್ನು ಬೇಡಿದ ಬಸವಣ್ಣನನ್ನು, ಆತನ ನೇತೃತ್ವದಲ್ಲಿ ನಡೆದ ವಚನ ಚಳವಳಿಯನ್ನು ದಲಿತ ವಿರೋಧಿ ಪರಿಕ್ರಮವೆನ್ನುವುದು ಎಷ್ಟು ಸೂಕ್ತ? ಹಿರೇಮಠರು ಮತ್ತೊಮ್ಮೆ ಈ ವಿಚಾರವನ್ನು ಪರಿಶೀಲಿಸಬೇಕು.

'ವಚನ ಚಳುವಳಿ ಆಧ್ಯಾತ್ಮಿಕ ವೈದಿಕ ಪರಂಪರೆಯ ಸಮರ್ಥನೆಯೆಂದು' ಹೇಳುವ ಹಿರೇಮಠರು ಇದಕ್ಕೆ ಸಂಬಂಧಿಸಿದ ಸರಿಯಾದ ಆಧಾರಗಳನ್ನು ನೀಡುವುದಿಲ್ಲ. ಬಸವಣ್ಣನವರ ಈ ವಚನಗಳನ್ನು (ವಚನ ಸಂಖ್ಯೆ ೫೨೭, ೫೨೮, ೫೪೯, ೫೩೫) ಹಿರೇಮಠರು ಉಲ್ಲೇಖಿಸಿರುವದು ಮೇಲಿನ ಹೇಳಿಕೆಗೆ ಸಮರ್ಥತೆಯನ್ನು ತಂದು ಕೊಡುವುದಿಲ್ಲ. ಈ ನಾಲ್ಕು ವಚನಗಳಲ್ಲಿ 'ಕೂಡಲ ಸಂಗಮ' ಮುಖ್ಯನಾಗುತ್ತಾನೇ ಹೊರತು ವೇದ, ಶೃತಿಗಳಲ್ಲ.

"ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ ಕೊಯಿವೆ." (ವ. ೭೧೬)
'ಗೀತವ ಹಾಡಿದಡೇನು, ಶಾಸ್ತ್ರ–ಪುರಾಣವ ಕೇಳಿದಡೇನು?' (ವ. ೧೮೮)
"ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ!
ವೇದ ಘನವೆಂಬೆನೆ? ಪ್ರಾಣಿವಧೆಯ ಹೇಳುತ್ತಿದೆ!
ಶ್ರುತಿ ಘನವೆಂಬೆನೆ? ಮುಂದಿಟ್ಟರಸುತ್ತಿದೆ!" (ವ. ೨೦೮)

"ವೇದಶಾಸ್ತ್ರದವರ ಹಿರಿಯರೆನ್ನೆ" (ವ. ೬೧೧)

"ಹಾರುವನ ಭಕ್ತಿ ಒಡಿನೊಳಗೆ ಅಗೆಯ ಹೊಯ್ದಂತೆ" (ವ. ೫೯೧)

ಎಂದು ಮುಂತಾಗಿ ಹಲವಾರು ವಚನಗಳಲ್ಲಿ ಬಸವಣ್ಣನವರು ವೇದ-ಶಾಸ್ತ್ರ-ಪುರಾಣ-ಶೃತಿ-ಆಗಮಗಳನ್ನು ಅಲ್ಲಗಳೆದಿದ್ದಾರೆ. ವೈದಿಕರ ಗೊಡ್ಡುತನವನ್ನು ಬಯಲಿಗೆಳೆದಿದ್ದಾರೆ. (ವಿವರಗಳಿಗೆ ನೋಡಿ. 'ಬಸವಣ್ಣನವರ ವಚನಗಳು' ಸಂ. ಡಾ. ಆರ್. ಸಿ. ಹಿರೇಮಠ- ವಚನ ಸಂಖ್ಯೆ ೨೧೯, ೫೫೨, ೫೬೯, ೫೮೫, ೫೯೮, ೫೯೯, ೭೪೯.)

ವೈದಿಕ ಸಂಸ್ಕೃತಿಗೆ ಪ್ರತಿಕ್ರಿಯೆಯಾಗಿ ಬಂದ ವಚನ ಚಳುವಳಿ, ವೈದಿಕ ಪರಂಪರೆಯನ್ನು ಸಮರ್ಥಿಸುತ್ತದೆಂಬ ಹಿರೇಮಠರ ಮಾತುಗಳಿಗೆ ಅವರ ಲೇಖನದಲ್ಲಿ ಸಮರ್ಪಕವಾದ ಆಧಾರಗಳಿಲ್ಲ.

ಹೀಗೆಂದಾಕ್ಷಣ ವಚನ ಚಳುವಳಿಯ ನೇತ್ಯಾತ್ಮಕ ಅಂಶಗಳನ್ನು ಗುರುತಿಸಬಾರದೆಂದಲ್ಲ. ಈ ಹಿಂದೆಯೇ ನಾನು ನನ್ನ ಒಂದು ಲೇಖನದಲ್ಲಿ ಈ ಭವಿ-ಭಕ್ತ ವಿಂಗಡಣೆಗೆ ಸಂಬಂಧಿಸಿದಂತೆ ಚರ್ಚಿಸಿದ್ದೇನೆ. (ನೋಡಿ- ೧. 'ಸಂಕ್ರಮಣ' ಧಾರವಾಡ ಜನೇವರಿ ೧೯೮೬ ೨. "ವಚನ ಚಳುವಳಿ" ಪುಟ : ೬ ಪಲ್ಲವಿ ಪ್ರಕಾಶನ ಗುಲಬರ್ಗಾ ೧೯೯೨) ವಚನಕಾರರ ಮಿತಿಗಳನ್ನು ಗುರುತಿಸಿ ಅವರು ವಿಫಲರಾದ ಸಂದರ್ಭಗಳನ್ನರ್ಥೈಸಿಕೊಂಡು ಹೊಸ ಹೋರಾಟವನ್ನು ಹುಡುಕಿಕೊಳ್ಳಬೇಕಾಗಿರುವುದು ಇಂದಿನ ಅನಿವಾರ್ಯ. ಆ ದಿಸೆಯಲ್ಲಿ ಹಿರೇಮಠರ ಪ್ರಯತ್ನ ಸ್ವಾಗತಾರ್ಹ. ಆದರೆ ತುಂಬ ತದ್ವಿರುದ್ಧವಾದ ನಿಲುವುಗಳನ್ನಿಟ್ಟುಕೊಂಡು ವಚನ ಚಳುವಳಿಯ ಮೌಲ್ಯಮಾಪನ ಮಾಡುವುದು ಅದಕ್ಕೊದಗಿಸುವ ನ್ಯಾಯವಾಗುವುದಿಲ್ಲ. ವಚನ ಚಳುವಳಿಯಲ್ಲಿ ನೇತ್ಯಾತ್ಮಕ ಅಂಶಗಳೇ ಇಲ್ಲವೆಂದಲ್ಲ, ಆದರೆ ಅಂಥವುಗಳನ್ನು ಅರಗಿಸಿಕೊಂಡು ಬೆಳೆದ ಈ ಚಳುವಳಿ ವೈದಿಕೇತರ ಸಂಸ್ಕೃತಿಯ ಪ್ರಮುಖ ಪ್ರಾರಂಭವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಯಜಮಾನ ಸಂಸ್ಕೃತಿಗೆ ಬದಲಾಗಿ ಜನಪರ ಸಂಸ್ಕೃತಿಯನ್ನು ಹುಟ್ಟುಹಾಕಿದ, ದಾನ ಸಂಸ್ಕೃತಿಗೆ ಬದಲು ದಾಸೋಹ ಸಂಸ್ಕೃತಿಯನ್ನು ತಂದ, ದೇವಾಲಯ ಸಂಸ್ಕೃತಿಗೆ ಬದಲು ಜೀವಾಲಯ ಸಂಸ್ಕೃತಿಯನ್ನು ಬೆಳಸಿದ, ಸೋಗಿನ ಸಂಸ್ಕೃತಿಗೆ ಬದಲಾಗಿ ಸ್ಪಷ್ಟ ಸಂಸ್ಕೃತಿಯನ್ನು ಮೂಡಿಸಿದ ವಚನ ಚಳವಳಿ ಈ ನಾಡು ಕಂಡ ಪ್ರಮುಖ ಚಳುವಳಿಯಾಗಿದೆಯೆಂಬುದನ್ನು ಮರೆಯುವಂತಿಲ್ಲ.

**ಬಸವರಾಜ ಸಬರದ, ಗುಲಬರ್ಗಾ**

# ಪ್ರತಿಕ್ರಿಯೆ : ಐದು

ಎಸ್. ಎಸ್. ಹಿರೇಮಠರವರು 'ಶರಣ ಚಳುವಳಿಯ ನಿಜ ಸ್ವರೂಪ' ಯೆಂಬ ಲೇಖನದಲ್ಲಿ ಎರಡು ನೇತ್ಯಾತ್ಮಕ ಸಂಗತಿಗಳನ್ನು ಹುಟ್ಟು ಹಾಕಿದ್ದಾರೆ.

ಶರಣರ ಬಹುದೇವೋಪಾಸನೆಯ ವಿರೋಧ, 'ದಲಿತ ವಿರೋಧಿ' ಕ್ರಮ ಎನ್ನುವದಾದರೆ, ಇಂದಿನ ಬಂಡಾಯ, ಪ್ರಗತಿಪರ ಧೋರಣೆಯ ಸಂಘ ಸಂಸ್ಥೆಗಳು, ಸರಕಾರ, ಹಾಗೂ ದಲಿತ ಸಂಘರ್ಷ ಸಮಿತಿಗಳು, ಒಕ್ಕೊರಲಿನಿಂದ, ಒಮ್ಮನಸ್ಸಿನಿಂದ, ನಿಯಂತ್ರಿಸಲು ಹೋರಾಡುತ್ತಿರುವ, ಪಶುಬಲಿ, ಬೆತ್ತಲೆ ಸೇವೆ, ದೇವದಾಸಿ ಪದ್ಧತಿಗಳು, 'ದಲಿತ-ವಿರೋಧಿ' ಕ್ರಮಗಳೆನ್ನದೆ ಗತ್ಯಂತರವಿಲ್ಲ. ದಲಿತರನ್ನು ಇದ್ದಲ್ಲಿಯೆ ಇಟ್ಟು 'ಅಪ್ಪಿ'ಕೊಳ್ಳಬೇಕು ಅನ್ನುವದಾದರೆ. ಶರಣರಷ್ಟೆ ಏಕೆ, ಅಂಬೇಡ್ಕರವರು 'ದಲಿತ ವಿರೋಧಿ'ಗಳೆ ಆಗುತ್ತಾರೆ. ಅಲ್ಲವೆ ? ಸಂಸ್ಕೃತದ ಉಕ್ತಿಗಳನ್ನು ಬಳಸುವದೆ 'ವೈದಿಕ'ವಾದರೆ ಸಂಸ್ಕೃತ ಭೂಯಿಷ್ಠ ಭಾಷೆಗೆ ಮನಸೋತ ಕುವೆಂಪು ಏನಾಗುತ್ತಾರೆ ?

'ಅಧ್ಯಾತ್ಮಿಕ ವೈದಿಕ ಪರಂಪರೆಯ ಮುಂದುವರಿಕೆ' ಎನ್ನುವ ಲೇಖಕರು, 'ವೈದಿಕ ಅಧ್ಯಾತ್ಮಿಕ ಅಂಶಗಳನ್ನು ಶರಣರು ವೀರಶೈವ ತತ್ವಜ್ಞಾನದಲ್ಲಿ ತುರುಕುತ್ತಾರೆ' 'ಸಂಸ್ಕೃತ–ವಾಙ್ಮಯವನ್ನು ಬಳಸಿಕೊಳ್ಳುತ್ತಾರೆ.' ಅನ್ನುವ ಮಾತನ್ನು ತೇಲಿಬಿಟ್ಟು, ತಟಕ್ಕನೆ ಇಂದಿನ ಮಠಾಧೀಶರು, ಪುರೋಹಿತಶಾಹಿಗಳತ್ತ ಪಲಾಯನ ಮಾಡುತ್ತಾರೆ. 'ಹಿರೇಮಠ'ರವರೆ ಇಂದಿನ ಮಠಾಧೀಶರನ್ನು ನೀವು 'ಶರಣ ಚಳುವಳಿಗೇಕೆ ಗಂಟು ಹಾಕುವಿರಿ ? ಶರಣ ಚಳುವಳಿಯ ಉತ್ತಮಾಂಶಗಳು ಸಹಿತ ದಿವಾಳಿ ಎದ್ದದ್ದೆ ಇವರಿಂದ, ಅನ್ನುವದು ಯಾರಿಗೆ ಗೊತ್ತಿಲ್ಲ ? ಬಸವಣ್ಣ 'ಜಂಗಮ ಪ್ರಾಣಿ' ಅಂದುಕೊಂಡದ್ದನ್ನು, ಮಾತ್ರ ನೆನಪಿಟ್ಟುಕೊಂಡು 'ಲಾಂಛನಕೆ ಶರಣೆಂಬೆ, ಲಾಂಛನಕೆ ತಕ್ಕ ನಡೆಯಿಲ್ಲದಿದ್ದರೆ ನಿನ್ನ ಸಾಕ್ಷಿಯಾಗಿ ಛೀಯೆಂಬೆ, ಥೂಯೆಂಬೆ ಮಾತನ್ನು 'ನೇತ್ಯಾತ್ಮಕ' ಚರ್ಚೆಯಲ್ಲಿ ನೇಪಥ್ಯಕ್ಕೆ ಸರಿಸುವುದು ಸರಿಯೆ ?

ಲೇಖಕರು ಶರಣ ಚಳುವಳಿಯನ್ನು 'ನೇತ್ಯಾತ್ಮಕ' ದೃಷ್ಟಿಯಲ್ಲಿ ಚರ್ಚಿಸುವ ಹುಮ್ಮಸಿನಲ್ಲಿ ದಲಿತರ ಪ್ರಗತಿಗೆ ಪೂರಕವಾಗುವ ಅಂಶಗಳನ್ನು ಎತ್ತಿ ಹಿಡಿಯುವ ಅಪಾಯಕ್ಕೆ ತಲೆ ಒಡ್ಡಿದ್ದಾರೆ.

ಬಿ. ಎಸ್. ದುಂಡರಡ್ಡಿ
ಸಜ್ಜಲ ಗುಡ್ಡ

## ಎಂ. ಡಿ. ವಕ್ಕುಂದ

# ಅವಸ್ಥೆ

೧

ಅವ್ವ ಎಂದರೆ ನನಗೆ
ತಟ್ಟನೇ ನೆನಪಾಗುವದು
ಅವಳು ಹಂಚುತ್ತಿದ್ದ ಅರ್ಧರೊಟ್ಟಿ
ಉಪವಾಸ ಬಿದ್ದಂಥ ಒಂದು ಹೊಟ್ಟೆ!

ಅವ್ವ ಎಂದರೆ ನನಗೆ
ತಟ್ಟನೆ ನೆನಪಾಗುವದು
ಕಣ್ಣೀರು ಕಳಕೊಂಡ ಅವಳ ಕಣ್ಣು
ನೋವಿನಲಿ ಬಿರಿದಂಥ ಎರಡು ಹುಣ್ಣು!

ನಾನಾಗ ಬಾಲಕ
ಒಂದು ಜತೆ ಹರಕು ಅಂಗಿಚೆಡ್ಡಿಗಳ ಸರದಾರ
ಅಡಿಗೆ ಮನೆಯಲ್ಲಿ ಬತ್ತಲೆಯಾಗಿ ಬಿಕ್ಕಿ
ಎಂದೋ ಹೊತ್ತಿದ್ದ ಒಲೆಯ ಬೂದಿ
ನನ್ನ ಕಣ್ಣೀರಿನಿಂದ ಒದ್ದೆಯಾಗುವಾಗ
ಅವ್ವ ಹೊರಗೆ ಅಂಗಿ ಚೆಡ್ಡಿಗಳನ್ನು ಒಗೆಯುತ್ತಿದ್ದಳು.
ನನ್ನ ಪಿಸಿದು ಹೋದ ಬಾಲ್ಯವನ್ನು
ಅವಳೆಷ್ಟು ಸಲ ಹೊಲೆದಿಲ್ಲ ?

೨

ಅಪ್ಪ
ಸದಾ ಸಲಿಕೆ ಗುದ್ದಲಿಗಳನ್ನು ಹೆಗಲಿಗೇರಿಸಿಕೊಂಡು
ಯುದ್ಧಕ್ಕೆ ಹೊರಟಂಥ ಯೋಧ.
ಬಾವಿ ಕಡಿಯುತ್ತಿದ್ದ ನಟ್ಟು ಕಡಿಯುತ್ತಿದ್ದ
ಒಡ್ಡು ಹಾಕುತ್ತಿದ್ದ.
ಪಟ್ಟಣದ ಜನರಿಗೆ ಕುಡಿಯಲಿಕ್ಕೆ ತೊಳೆದುಕೊಳ್ಳಲಿಕ್ಕೆ
ನೀರು ಸರಬರಾಜಾಗಲು ಮಲಪಹಾರಿ ಹೊಳೆಗೆ
ಕಾಲುವೆಯ ತೋಡುತ್ತಿದ್ದ.

ಒಟ್ಟಾರೆ ನೆಲವ ಬಗೆಯುತ್ತಿದ್ದ.
ಭೂಮಿಯ ಹೊರಮೈಯ ಮಣ್ಣು
ಅವನ ಬೆವರಿಂದ ತೊಯ್ದು ಹೋಗಿದೆ.
ಗರ್ಭದೊಳಗಿನ ರತ್ನವನ್ನ ಮುಟ್ಟಲಿಲ್ಲ.

ಸೀಂಡಿಲ್ಲದ ಲಾಟೀನಿಗೆ
ಕಡತಂದ ಚಿಮಣಿ ಎಣ್ಣೆ ಸುರಿದು
ಎಣ್ಣೆ ತೀರುವವರೆಗು ಬತ್ತಿ ಆರುವವರೆಗು
ಪತ್ತಿರವೇ ಕುಳಿತು
ಓದುಬಾರದ ಅಪ್ಪ ಓದು ಕಲಿಸುತ್ತಿದ್ದ.
ನನ್ನ ಒಣಗಿದ ತುಟಿಗಳಲ್ಲಿ
ಅಕ್ಷರಗಳು ಪಟಪಟಿಸುವಾಗ
ಒಡಕು ಪಾಟಿಯ ಮೇಲೆ
ಮೊಗ್ಗುಗಳು ಬಿರಿಯುವಾಗ
ಅವನ ಕಣ್ಣುಗಳೇಕೆ ಹನಿಗೂಡುತ್ತಿದ್ದವೆಂದು
ನನಗೆ ತಿಳಿದದ್ದು ತೀರ ಇತ್ತೀಚೆಗೆ.

ಆಡಲು ಗುಂಡವಿರದ ನಾನು
'ಬಾ ಬಾ ಹಕ್ಕಿ ಬಣ್ಣದ ಹಕ್ಕಿ ಹಣ್ಣನು
ಕೊಡುವೆನು ಬಾ ಬಾ' ಎಂದು
ಆಗಸದ ಮೂಲೆ ಮೂಲೆಗಳ ಗಲಗಲಿಸುತ್ತಿದ್ದ.
ಹಕ್ಕಿ ಸಂಕುಲವನ್ನು ಎಷ್ಟು ಸಾರಿ ಕೈ ಮಾಡಿ ಕರೆದರು
ಒಂದು ಹಕ್ಕಿಯೂ ಬಳಿ ಸಾರಲಿಲ್ಲ.
ನನ್ನ ಹತ್ತಿರ ಹಣ್ಣಿಲ್ಲದ್ದು ಹಕ್ಕಿಗಳಿಗೆ ಗೊತ್ತಾಗಿಬಿಟ್ಟಿದೆಯೆಂದು
ಅತ್ತುಬಿಡುತ್ತಿದ್ದೆ.
ಅಪ್ಪ ನೆನಪಾಗಿ ಓದು ನೆನಪಾಗಿ ಓಟ ಕೀಳುತ್ತಿದ್ದೆ.

೩

ಬದುಕನ್ನ ಹುಡುಕುತ್ತ ಬಂದೆ
ಎದುರಾದದ್ದು ಬರೀ ಸಮಾಧಿಗಳೇ.

೪

ಈ ಕರಾವಳಿಯು ಬೆಡಗಿ ಗೆಜ್ಜೆ ಕಟ್ಟಿಕೊಂಡು
ಕುಣಿಯುತ್ತಲೇ ಬಂದಳು. ಎದೆಯನ್ನು ಹಾಸಿದೆ.
ಇವಳು ಅವ್ವನ ಹಾಗೆ ಹರಿದ ಬಟ್ಟೆಗಳನ್ನು ಹೊಲಿಯಲಿಲ್ಲ
ಕಳಚಿಬಿಟ್ಟಳು. ಒಳಹೊರಗುಗಳಿಗೆ
ಹೊಸ ಬಟ್ಟೆಗಳನ್ನು ತೊಡಿಸಿ ಬಿಟ್ಟಳು.
ನಾನೊಂದು ನದಿಯಾದೆ
ಹರಿಯುವದು ಹುಟ್ಟುಗುಣವಾಯಿತು
ಹರಿಯುತ್ತ ಹರಿಯುತ್ತ ಕಡಲ ಸೇರುವದು ಗುರಿಯಾಯಿತು
ನನ್ನ ಇಪ್ಪತ್ತೈದನೆಯ ವಸಂತವನ್ನು
ಇವಳು ಎಷ್ಟು ಶ್ರೀಮಂತಗೊಳಿಸಿದಳು!

ಈಗಲೂ ಹಗಲು ರಾತ್ರಿ ಹನ್ನೆರಡು ತಿಂಗಳು
ಹಾಡುತ್ತಲೇ ಇರುತ್ತೇನೆ
'ಬಾ ಬಾ ಹಕ್ಕಿ ಬಣ್ಣದ ಹಕ್ಕಿ ಹಣ್ಣನು ಕೊಡುವೆನು ಬಾ ಬಾ'
ಇವಳು ನಾಚುತ್ತಾಳೆ ನೀರಾಗುತ್ತಾಳೆ ಹರಿಯುತ್ತಾಳೆ
ನನ್ನ ಮನೆ ಎರಡು ನದಿಗಳ ಸಂಗಮವಾಗುತ್ತದೆ
ಒಂದು ನದಿ ಕಡಲಾಗುತ್ತದೆ
ಇನ್ನೊಂದು ಕಡಲನ್ನು ಸೇರುತ್ತದೆ,

೫

ಹೀಗೆಯೇ
'ಬಾ ಬಾ ಹಕ್ಕಿ ಬಣ್ಣದ ಹಕ್ಕಿ———' ಹಾಡುವಾಗ ಒಮ್ಮೊಮ್ಮೆ
ಆ ಬೇಂದ್ರೆ ಎಂಬ ಕವಿ ಬರೆದ ಕಾಲನ ಹಕ್ಕಿ
ಭೂಮಿ ಆಗಸಗಳ ರೆಕ್ಕೆ ಬಡಿಯುತ್ತ
ಧುತ್ತನೆ ಎದುರಾದಂತಾಗಿ ತಲ್ಲಣಗೊಳ್ಳುತ್ತೇನೆ.
ನನ್ನ ಬಣ್ಣದ ಹಕ್ಕಿಯನ್ನ ಬಿಗಿಯಾಗಿ ತಬ್ಬಿಕೊಳ್ಳುತ್ತೇನೆ.

# ಎರಡು ಕವನಗಳು

## ೧ ಓ ಶಬ್ದವೇ

ಹಕ್ಕಿ ಮೊರೆಯಿಡುತ್ತಿದೆ
ಮರಗಳಿಗೆ,
ನೀರೂ ಮಣ್ಣಿಗೆ.
ಗಂಧವು ಕೈ ಬೀಸಿ ಕರೆಯುತ್ತಿದೆ
ಗಾಳಿಗೆ.

ಶಬ್ದವೇ ಬಾ ಇಲ್ಲಿ
ಬಚ್ಚಿಟ್ಟುಕೊಳ್ಳಬೇಡ
ಬೆಟ್ಟದ ಹುಲ್ಲಿನಲ್ಲಿ.
ಕಡಲ ತೆರೆಗಳ ಮೇಲೆ
ನಲಿದಾಡಿ
ನೀರಿನಾಳಕ್ಕಿಳಿಯಬೇಡ.
ತೀರದ ಮರಳ ಮೇಲೆ
ಮರೀಚಿಕೆಯಾಗಿ
ನನಗೀಪರಿ ಮೋಡಿ ಹಾಕಬೇಡ
ಶಬ್ದವೇ ಬಾ ಇಲ್ಲಿ,

## ೨ (ಅ) ನ್ಯಾಯ

ಕಾಂಟ್ರ್ಯಾಕ್ಟರುಗಳೊಡನೆ
ಆಗುತ್ತಲೇ ಒಪ್ಪಂದ
ಜಾರಿಯಾಯ್ತು
ಮರಣ ದಂಡನೆಯ ಶಿಕ್ಷೆ.
ಕೆಳಗುರುಳಿದವು ತರು-ಗಿಡ
ಪರಿಸರ, ಮರ-ಮರ.
ಜಂತಿ-ತೊಲೆ–ಕಂಬ–ಬಂಗಲೆ
ಎದ್ದು ನಿಂತವು.
ಗದ್ದುಗೆ, ಪೀಠೋಪಕರಣ,

ಮೊಳಗಿದವು ಭಾಷಣ
ಉರುಳಿದವು ಕೈಗಾರಿಕೆಯ ಚಕ್ರ
—ದಗ್ನಿ ಪರೀಕ್ಷೆಯಲಿ.
ಮರುಹುಟ್ಟು ಪಡೆದು
ನ್ಯೂಜ್ ಪ್ರಿಂಟ್‌ನ ಸುರುಳಿಯೊಳಗಿಂದ
ಘೋಷಣೆಗಳ ಹೊತ್ತ ಮರಗಳು
ದಿನಪತ್ರಿಕೆಯ ಮುಖಪುಟದಲ್ಲಿ
ಕೇಳುತ್ತಿವೆ ನ್ಯಾಯ
ದಿನವೂ ನಸುಕಿನಲ್ಲಿ.

## ಹಮೀದ್ ಮಂಜೇಶ್ವರ

# ಮೂರ್ಖ ತಂದೆಯ ಸ್ವಗತ

ಮಗಳೆ
ಮೂರ್ಖ ತಂದೆಯ ಸ್ವಗತಕ್ಕೆ
ಮಣೆ ಮಂತ್ರವಾಗಿ ಬೆಳೆದ 'ಕಪ್ಪು ಮೂಟೆ'

ನಗು,
ಹೊಗೆಯಲಿ ಬಿಂಬಿಸುವ ಮುಖ
ಪರದೆಯಲಿ ಅರಳುವ ಕಣ್ಣು
ಪ್ರತಿಬಿಂಬವಷ್ಟೆ ತೊಳೆದ ಬಟ್ಟಲ ಮೆರುಗು.

ಮಡಿಲ ಕುಣಿತದಲ್ಲಿ
ತೆರೆದ ಗೋಪುರ
ಅರ್ಥ ಹುಡುಕದ ಪಂಚಾಂಗದ
ಮರೆ ಮರೆ ಮರೆಯಲ್ಲಿ
ಕಳಚುವಾಗ
ಬಿಳಿಗಡ್ಡದುತ್ತರಕ್ಕೆ ಎತ್ತರ ನನ್ನದೇ ಮುಖ.

ಎಲೆ ಕೊಂಬೆ ರೆಂಬೆಗಳೆಲ್ಲಾ
ನೆರಳು ತುಂಬಿ
ಅಪ್ಪಿದ್ದು
ಅಮೂರ್ತದ ಅರಸುವಿಕೆಯಲ್ಲಿ
ಗೋಪುರ-
ದ ಬಾಗಿಲುಗಳ ಮುಚ್ಚಿ ಬಿಟ್ಟೆ.

ಮಗೂ
ಅರಳುವ ಮೊಗ್ಗುಗಳ ಕೆಳಗೆ
ತಂದಿಟ್ಟ ಹಾಲು
ಗಂಗಾಳದ ತಳದಲ್ಲಿ ಒಡೆದಿದ್ದು:
ಗೆದ್ದ ಮುಖದಲ್ಲಿ
ನಕ್ಕಾಗ ಅರ್ಥ-ಅಟ್ಟಹಾಸ.
ಅವಿೂನಾ
ಒಗೆದು ಒಗೆದೂ ಬಟ್ಟೆ ಹರಿವ ಮುನ್ನ
ಕಾಲು ಕೊಡವಿ ನಡೀತೀಯಾ, ನಗುತೀಯಾ
ಆಗ ನೋಡುತ್ತೇನೆ
ನನ್ನ ಕೊಡವಿದ ಕೋಟೆಯ ಮೇಲೆ ನಿನ್ನ ಹೆಜ್ಜೆಗಳು
ನನ್ನ ಕನಸಿನ ಅರಮನೆಯಲ್ಲಿ ನಿನ್ನ ಕಣ್ಣುಗಳು

ಎಸ್. ಸಿ. ಸದಾಶಿವ

---

# ವಿಮರ್ಶಕ ಗೆಳೆಯ

ಗೆಳೆಯಾ ನೀ ಉಳಿಬೇಕು
ಬೆಳೀಬೇಕು, ಮೈ ಚಳಿ ಬಿಡಬೇಕು
ಮುಖದಲಿ ಕಳೆಯಿರಬೇಕು
ಉದ್ದ ಬಾಲದ ಚೀಲ,
ಜೋತು ಬಿದ್ದಿರಬೇಕು.

ಸುದ್ದಿಯಲಿರಲು ಬುದ್ಧಿಯೇ ಬೇಕೆ ?
ಪೆದ್ದರ್ಹೇಳುವ ಮಾತು.
ಉದ್ದುದ್ದ ಶಬ್ದಗಳೇ ಸಾಕು.

ಕದ್ದು ಬರೆದರೂ ಮುದ್ದಾಗಿರಬೇಕು
ಎದ್ದು ಎಂತಾದರೂ ಹೇಳ ಬರಬೇಕು
ಸಿದ್ಧ ಪದಗಳ ಸಿದ್ಧಿ ಇರಬೇಕು
ಮುದ್ದಾಗಿ ಜೋಡಿಸಿ ಮರುಳಾಗಿಸಬೇಕು

ಬದ್ಧವಾದುದ ಬರೆದು ಜಿದ್ದುಗಳಿಸದಿರು
ಯಾರೇನೆ ಬರೆಯಲಿ ಜರಿಯುದಿರು
ಚುಟುಕದಷ್ಟು ಓದಿ ಪುಟದಷ್ಟು ಬರಿ
ಆದರ ಚಟಕ ಶ್ರಾದ್ಧ ಮಾಡುವುದ ಅರಿ,

ಉರು ಹೊಡಿ ಬರಹಗಾರನ ಪ್ರವರ
ಗರ ಹೊಡಿದಂತೆ ಬರುವುದು ವರ
ಹಾಕು ಅವನಿಗೆ ಪರಾಕು
ಸಂಭಾವನೆ ಕತ್ತರಿಸಲಷ್ಟೇ ಸಾಕು.

ಸ್ತುತಿಯೇ ಸುಖದ ಸೋಪಾನ
ಫಲಿಸುವುದು ಉಚಿತ ಸುರಾಪಾನ
ಚೇಲ ಎಂದಾರೇ ಜರಿದರೂ
ಚೇಲ ಹೊರುವುದ ಬಿಡದಿರು!

ಸೇರೊಂದು ಮಠ
ಬೆಳೆಸೊಂದು ಕೂಟ
ಕತ್ತರಿಸು ರಸದೂಟ.

ಎ. ಪ್ರಭಾಕರ ಹೆಗ್ಡಾಳ್

# ಎರಡು ಕವನಗಳು

## ೧ ನನ್ನೊಳಗಿನ ಅವನನ್ನು

ಕಡಲಂಚಲ್ಲಿ ಅವನನ್ನು
ಆಡಲು ಬಿಟ್ಟು
ನಾನಲ್ಲಿ ದೃಷ್ಟಿ ಕೀಲಿಸಿ ಕುಳಿತಿದ್ದೆ.
ನೀವು ಬಂದಿರಿ;
ಬಂದವರು ಅವನನ್ನು ಗೇಲಿ ಮಾಡಿದಿರಿ.
ಹಿಡಿದೆಳೆದಾಡಿದಿರಿ.
ನನಗೆ ಬೇಸರವಿರಲಿಲ್ಲ;
ಆದರೆ ಯಾವ ಕ್ಷಣಕ್ಕೂ
ನಿಮ್ಮ ಸಮುದ್ರದಾಟಕ್ಕೆ
ಅವನನ್ನು ಎಳೆದೊಯ್ಯಲಿಲ್ಲ.
ನಾನು ನೋಡಿದೆ
ದಡದ ಮರಳಲ್ಲಿ
ಮುದುಡಿ ಕುಳಿತ ಆ
ಕಣ್ಣುಗಳಲ್ಲಿ ಉಪ್ಪು ಕಡಲು
ಉಕ್ಕುವುದನ್ನು;
ಅದರೊಳಗೆ ನಿಮ್ಮಾಟದ
ಬಿಂಬವನ್ನು.
ಉಕ್ಕಿ ಕೊಚ್ಚಿಕೊಂಡು
ಆಳಕ್ಕೆಳೆದೊಯ್ಯುವ ಮುನ್ನ
ಹಿಡಿಯಬೇಕೆಂದು ಓಡಿದೆ... ...
.................
ಈ ಉಪ್ಪು ಕಡಲ ಬಗೆಯುದೇ
ಹಿಂದಿರುಗಲಾರನೆಂದ ಹುಡುಗ
ಸಿಗಲೇ ಇಲ್ಲ.

ಎಳೆ ಮೊಗದ ಆ
ದುಃಖತಪ್ತ ನನ್ನುಡುಗ.

ಓಡಿದೆ...... ಕೂಗಿದೆ........
ಈ ಉಪ್ಪು ಕಡಲಿಗೆ ಕೊನೆಯೇ ಇಲ್ಲ
ಮುಗೂ..............
ಅದು ನುಂಗುವ ಶಕ್ತಿಗೆ
ಆಹಾರವೇ ಇಲ್ಲ.
...................
.........ಸಿಕ್ಕನೇ
ನನ್ನ ಶಕ್ತವಲ್ಲದ ಶಕ್ತಿಗೆ
ಸಿಗಲಾರದ ಆ ಹುಡುಗ,
ಕಡಲಾಳದ ಬಗೆದು ಮುತ್ತ
ತರುತ್ತೇನೆಂದ ನನ್ನುಡುಗ.

## ೨ ಓಡಬೇಕಿತ್ತು ಬೆತ್ತಲೇ...?

ಅಪ್ಪ
ಕೊಡಿಸಿದ ಬಟ್ಟೆಯೊಳಗೆ,
ಅಮ್ಮ
ಹೆಣೆದ ಕಸೂತಿಯೊಳಗೆ
ನಾನಡಗಿ ಬಿಟ್ಟೆ.
ಯಾರೂ ಗುರುತಿಸಲೇ ಇಲ್ಲ
ಬಟ್ಟೆಯೊಳಗಿನ ಹುಡುಗನನ್ನ;

ಎಲ್ಲರೂ ಹೊಗಳುವವರೇ
ಬಟ್ಟೆಯೊಂದಿಗಿನ ಕಸೂತಿಯು.

ನಾನೀಗ,
ಈಗೆ ಇಲ್ಲವಾಗುವ ಮೊದಲು
ಎಳವೆಯಲ್ಲೇ
ಓಡಬೇಕಿತ್ತು ಬೆತ್ತಲೇ
ಕಳೆಯು ಬೇಕಿತ್ತು ಕೆಚ್ಚಲೇ.

## ಶೈಲಜಾ ಪುದುಕೋಳಿ

# ಸೃಷ್ಟಿ

ದಟ್ಟ ಕತ್ತಲು
ನಿರಾಳ ನಿಟ್ಟುಸಿರುಗಳ ಬಿಕ್ಕುಗಳ
ನೂರು ನೋವುಗಳ ವ್ಯಾಖ್ಯಾನ

ಇಲ್ಲಿ ಧ್ವನಿಗಳು ಪ್ರತಿಧ್ವನಿಸುವುದಿಲ್ಲ
ಮೌನದಲಿ ಮಿಡಿವ
ಜೀವಗಳೆಲ್ಲ ಪಶುಗಳಾಗುತ್ತವೆ
ಕೀವು–ರಕ್ತ–ಮಾಂಸ–
ಹೊರಬಂದರೂ ತೃಪ್ತವಾಗದ
ಹೃದಯ ಹಿಂಡುವ ಪಾಶವೀಕೃತ್ಯಕ್ಕೆ
ಅಂಬಿಕೆಯಂದಿರು ಬಿಳಚಿಕೊಂಡದ್ದು-
ಈ ವರ್ತುಲದೊಳಗೆ-
ಸಂಕೇತಗಳು ಮಸುಕಾಗುತ್ತವೆ.
ಮೌಲ್ಯಗಳು ಅರ್ಥಹೀನವಾಗುತ್ತವೆ
ಸಮಸ್ಯೆಗಳು ಪರಿಹಾರವಾಗುವುದಿಲ್ಲ

ಈ ದಟ್ಟ ಕತ್ತಲು
ಬಿಚ್ಚಿದ್ದೆಲ್ಲವನು ಬಚ್ಚಿಡುತ್ತದೆ
ಬೆಳಕಲ್ಲಿ ನಡೆದುದಕ್ಕೆ ತೆರೆಹಿಡಿಯುತ್ತದೆ
ನಿಶೆ ಇಳಿಯುತ್ತದೆ
ಉಷೆ ಮೂಡುತ್ತದೆ

ಮಾನವರು ಮತ್ತೆ ಹುಟ್ಟುತ್ತಾರೆ
ಪಶುಗಳಾಗುತ್ತಾರೆ.

ಎಂ. ಲೋಕೇಶ

# ಓತಿಕ್ಯಾತನೂ ಕಮ್ಯುನಿಷ್ಟರವನೂ

ಗೆಳೆಯ ಕಮ್ಯೂನಿಷ್ಟ, ಬೆಳಂಜಾವ ಎದ್ದವನೇ
ಅಂಗೈಯಲ್ಲಿ ಕಣ್ಣಿಟ್ಟು "ಕರಾಗ್ರೇ.. ವಸತೇ"
ಗುಣಿಗುಣಿಸಿ ಸ್ನಾನ—ಪೂಜಾದಿ ಮುಗಿಸಿ
ಕೊಳಕು ಜನಿವಾರದಲಿ ಮೈಯೆಲ್ಲಾ ಉಜ್ಜಿ
ಹೊರಗಾದಾಗ ಸೂರ್ಯ ಚಾಮುಂಡಿ ಬೆಟ್ಟ ನೆಗೆದಿರುತ್ತಾನೆ.

ಆಗಲೇ ಹೊರಗಾದ ಓತಿಕ್ಯಾತ
ಕತ್ತೊಮ್ಮೆ ಆಚೀಚೆ ಗಿರಿಗಿರಿಸಿ
ಅಷ್ಟಾವಕ್ರ ಮೈ ಸೀಟಿ ನಾನಾ ಭಂಗಿಯಲ್ಲಿ
ಕುಸ್ತಿ ಪಟುವಿನ ಹಾಗೇ...ಮೈ ಸುಡುತ್ತಾ
ಸೂರ್ಯನೆಡೆ ಕತ್ತುಚಾಚಿ ಅಣಕಿಸುತ್ತದೆ.

ಕಾಲಲ್ಲಿ ಚಕ್ರವಿಲ್ಲಾ ಉರುಳು ಗೋಲಕ
ಎತ್ತೆಂದರತ್ತ ಜಾರುವುದೂ ದಾರಿ ಬಾಗಿದತ್ತ
ಸ್ವಜಾತಿಯವರೊಡನೆ ಒಂದು ಮಾತು
ಅನ್ಯಜಾತಿಯವರೊಡನೆ ಬೇರೆಯದೇ ಮಾತು
ಹೊರಳು ನಾಲಗೆಗೆ ಎಲುಬಿಲ್ಲವಲ್ಲಾ...

ತನ್ನಾಚೆ ಈಚೆಯ ಜಗತ್ತೇ ಮರೆತು
ದೂರ.. ರಷ್ಯಾದ ಹಾಡಿ ಹೊಗಳುತ್ತಿರಲು
ರಷ್ಯಾವೇ ಸಿಡಿದು ಚೂರಾದಾಗ
ಧೃತಿಗೆಟ್ಟು, ಗಲಿಬಿಲಿಸಿ... ಸಮರ್ಥಿಸಿ
ಒಂದಿಷ್ಟು ರಂ ಕುಡಿದು ಪೊಟರೆ ಸೇರುತ್ತಾನೆ

# ವಸಂತನ ಬೆರಕೀತನ

(ನಾಲ್ಕು ಹನಿಗಳು)

೧

ಬತ್ತಲೆಯಾಗುತ್ತಿದ್ದಾಳೆ
ಮರ ನೀರೆ
ಧರಿಸಿ ಬಸಿರ
ಉಟ್ಟುಕೊಳ್ಳಲು
ಹಸಿರ ಸೀರೆ

೨

ಹಡದಿ ಹಾಸುತ್ತಿದೆ
ಮರ
ಹರವಿ ತರಗೆಲೆ
ಹಸೆಗೆ ಬರುವ
ಒಸಗೆಯಲ್ಲಿದ್ದಾನೆಂದು
ರಾಜ ವಸಂತ

೩

ಹೂವಿರದ
ವಸಂತ,
ಹಸುರಲ್ಲೇ
ಚಿಗುರಿಸುತ್ತಾನೆ
ಎದೆಯೊಳಗಿನ
ಬೆದೆಯ

೪

ಹುಳಿ ಬಯಕೆ
ಒಗರ
ಒಡಮೂರಿಗೆಯಲ್ಲಿ
ಚಿಗುರುತ್ತಿದ್ದಾಳೆ
ಮಾಮರವೆಂಬ
ನೀರೆ

## ಶಿವಾನಂದ ಚಿತ್ರಗಾರ

# ಪ್ರಾಚ್ಯ ವಸ್ತು

ಕಣ್ಣ ಬಿಂಬಿನಲ್ಲಿ ಕಂಡ
ಸ್ಥಿರಗೊಂಡ ರೂಪ ಚಿತ್ರ,
ಐತಿಹಾಸಿಕ ಶಿಲಾ ಶಾಸನದಂತೆ
ದೊಡ್ಡ ಗ್ರಂಥವಾಗಿ
ಉಳಿದಿರುವ ಅವಶೇಷದ
ಸಣ್ಣ ಕವಿತೆಯಾಗಿ
ಓದಲು ಬಾರದಿರೆ ಹಾಡಲು ಬಾರದಂತೆ
ಸಂಗ್ರಹಾಲಯದ ಒಳ ಸೇರಿದೆ
ಪ್ರಾಚ್ಯ ವಸ್ತುವಿನಂತೆ.

## ಪ್ರಕಾಶ್ ಆರ್. ಕಮ್ಮಾರ

# ಬೆತ್ತಲೆ ಮರ

ಅಡವ್ಯಾಗ ಸೀದಾ–ಸಾದಾ ಮರಯಿದ್ರ
ಕೊಡ್ಲೀಗೆ ಬಲಿ ಅಕ್ಕಾವು.
ಗಂಟು–ಗಂಟಾದ ಮರಯಿದ್ರ
ಕಡೆಗಣಸ್ತಾರ.

ಹಾಂಗ ಸರಳದಿಂದಿದ್ರ
ನಮ್ಮನ ಸಮಾಧಿ ಮಾಡ್ತಾರೆ.
ಮಂಡಿಯೂರಿ ಮುಂಗೈ
ಜೋಡ್ಸಿ ಬಂದ್ರ ಮ್ಯಾಕ ಏಳ್ದಂಗ
ಪಾಡಾಗಿ ತುಳೀತಾರ.

ನಿಮ್ಮ ನಡುಕಿನ್ಯಾಗ ತಡಕಾಡತೇವಿ
ಗೇಣು ಹೊಟ್ಟಿ ಅರಿವೆಗಾಗಿ.

ನಾವು ಆಗೇವಿ ನೀರಿಲ್ಲದ
ಬೆತ್ತಲೆ ಮರ.

# ಬಿ. ವ್ಹಿ. ಶಿರೂರ ಅವರ 'ಸಂಶೋಧನ ಸ್ವರೂಪ' ನಾಮನ ನಂದಾವರ

ಡಾ. ಶಿರೂರ ಅವರ **ಸಂಶೋಧನ ಸ್ವರೂಪದ** ಕುರಿತು ಹೇಳುವಾಗ ೧೯೯೦ ರಲ್ಲಿ ಪ್ರಕಟವಾದ ಅವರ **ಸಂಶೋಧನ ವ್ಯಾಸಂಗದ** ಕುರಿತೂ ತಿಳಿಸಬೇಕಾಗುತ್ತದೆ. ಹಾಗೆ ನೋಡಿದರೆ ಇದು ಹೊಸ ಕೃತಿಯಲ್ಲ; **ಸಂಶೋಧನ ವ್ಯಾಸಂಗವೇ** ಪರಿಷ್ಕಾರ ಪಡೆದು ಈ ಹೆಸರಿನಲ್ಲಿ ಪ್ರಕಟವಾಗಿದೆ. ತೀ.ನಂ. ಶ್ರೀ ಸ್ಮಾರಕ ಬಹುಮಾನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪುರಸ್ಕಾರ ಪಡೆದ ಈ ಗ್ರಂಥ ಕ್ಷಿಪ್ರ ಅವಧಿಯಲ್ಲಿಯೇ ಪ್ರತಿಗಳು ಅಲಭ್ಯ ಎನ್ನುವ ದಾಖಲೆ ನಿರ್ಮಿಸಿದೆ.

ಮುನ್ನುಡಿಯಲ್ಲಿ ಡಾ. ಎಂ. ಎಂ. ಕಲಬುರ್ಗಿಯವರು ಹೇಳಿರುವ ಕೆಲವು ಮಾತು; 'ಸಾಹಿತ್ಯ ಕಲಾಕ್ಷೇತ್ರಕ್ಕೆ ಸಂಬಂಧಪಟ್ಟ ಸಂಶೋಧನ ಶಾಸ್ತ್ರ ಸಾಮಾನ್ಯ ಸ್ವರೂಪದ್ದಾಗಿದ್ದರೂ, ಭಾಷೆ ಸಂಸ್ಕೃತಿಗಳ ಭಿನ್ನತೆಯಿಂದಾಗಿ ಅದು ಕೆಲಮಟ್ಟಿಗೆ ಭಿನ್ನರೂಪ ಪಡೆಯಬೇಕಾಗುತ್ತದೆ. ಅಂದರೆ ಕನ್ನಡ ಸಂಶೋಧನ ಶಾಸ್ತ್ರ ಕನ್ನಡಪರವಾಗ ಬೇಕಾಗುತ್ತದೆ. ತಾತ್ವಿಕ ಹಾಗೂ ಆನ್ವಯಿಕ ಈ ಎರಡೂ ನೆಲೆಗಳಲ್ಲಿ ತಮ್ಮ ಬರವಣಿಗೆಯನ್ನು ಕನ್ನಡ ಪರಗೊಳಿಸಿರುವುದನ್ನು ಇಲ್ಲಿ ಕಾಣುತ್ತೇವೆ... ಹೀಗಿದ್ದರೂ ವಿಷಯದ ವರ್ಗೀಕರಣ, ಪರಿಕಲ್ಪನೆಗಳ ಅರ್ಥಗ್ರಹಣ, ಪಾರಿಭಾಷಿಕ ಪದನಿರ್ಮಾಣ ಮತ್ತು ನಿರೂಪಣೆಯ ವಿಧಾನಗಳಲ್ಲಿ ಕೆಲವೊಮ್ಮೆ ಇನ್ನೂ ಉತ್ತಮವಾದ 'ಶಾಸ್ತ್ರ ಶಿಸ್ತು' ಇಲ್ಲಿ ಅಪೇಕ್ಷಣೀಯವೆನಿಸುತ್ತದೆ." ಇದಕ್ಕೆ ಪೂರಕವಾಗಿ ಡಾ. ಹಾ. ಮಾ. ನಾಯಕರ ಮಾತುಗಳು : "ಪುಸ್ತಕದ ಒಂದು ಕೊರತೆಯೆಂದರೆ ಅದು ಚಿಕ್ಕದಾಗಿರುವುದು. ಇನ್ನಷ್ಟು ಮಾಹಿತಿ ಸಂಗ್ರಹಿಸಿ ಇದನ್ನು ಒಂದು ಮೂಲಭೂತ ಆಕರ ಗ್ರಂಥವಾಗಿಸುವ ಸಾಧ್ಯತೆ ಇತ್ತು."

**ಸಂಶೋಧನೆ, ಸಂಶೋಧಕ, ಸಂಶೋಧನ ವಿಷಯಗಳನ್ನು** ಕೂಲಂಕಷವಾಗಿ ಚರ್ಚಿಸಿರುವ ಗ್ರಂಥಗಳು ಇಂಗ್ಲಿಷ್ ಭಾಷೆಯಲ್ಲಿ ಸಾಕಷ್ಟು ಬಂದುದುಂಟು. ಆದರೆ ಕನ್ನಡದಲ್ಲಿ ಬಂದಿರುವ ಇಂತಹ ಪುಸ್ತಕಗಳೆಲ್ಲ ಸೀಮಿತ ಪರಿಮಿತಿಯವು. ಬಹುಶಃ ಈ ಎಲ್ಲ ಹಿನ್ನೆಲೆ ಪ್ರೇರಣೆಗಳೇ **ಸಂಶೋಧನ ಸ್ವರೂಪದ** ಪ್ರಕಟಣೆಗೆ ಕಾರಣ ಎನ್ನಬಹುದು. ಸಂಶೋಧನ ಕ್ಷೇತ್ರದಲ್ಲಿ ಪ್ರಥಮ ಸಲ ಕಾಲಿಡುವವರಿಗೆ ಸ್ಪಷ್ಟ ಮಾರ್ಗದರ್ಶನ ಲಭ್ಯವಾಗದ ಕೊರತೆಯನ್ನು ನೀಗಿಸಲು ಹೊರತಂದ ಈ ಪರಿಷ್ಕೃತ ಆವೃತ್ತಿ ೨೨೮ ಪುಟಗಳ ೧೩ ಅಧ್ಯಾಯಗಳನ್ನು ಹೊಂದಿದೆ.

---

* ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ; ೧೯೯೨; ರೂ ೩೦.

ಪ್ರಸ್ತಾವನೆ (ಅಧ್ಯಾಯ ೧) ಯಲ್ಲಿ ಭಾರತದ ಪ್ರಸಿದ್ಧ ಸಂಶೋಧನ ಕೇಂದ್ರಗಳ, ಸಂಶೋಧನೆಗೆ ದೊರೆಯುವ ಧನ ಸಹಾಯ, ಶಿಷ್ಯ ವೇತನ ಮೂಲಗಳ, ಸಂಶೋಧನೆಯಿಂದ ಸಮಾಜಕ್ಕೆ ಒಟ್ಟು ಮಾನವ ಕುಲಕ್ಕೆ ಸಿಗುವ ಉಪಯೋಗದ ಬಗೆಗೆ ಚರ್ಚೆ ನಡೆಸಿದ್ದಾರೆ. "ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು" ಎಂದಿದ್ದ ಡಾ. ಬಿ. ಆರ್. ಅಂಬೇಡ್ಕರ್, ಇತಿಹಾಸ ಸಾಹಿತ್ಯ ಸಂಸ್ಕೃತಿಗಳ ಸಂಶೋಧನೆಯ ಬಗೆಗೆ ತಳೆದಿದ್ದ ದೂರ ದೃಷ್ಟಿ. ತಲೆತಲಾಂತರದಿಂದ ತುಳಿತಕ್ಕೆ ಒಳಗಾಗಿದ್ದ ಜನಾಂಗಗಳ ಇತಿಹಾಸವನ್ನು ಎತ್ತಿಕಟ್ಟಲು, ಅವರ ಮೂಕ ವೇದನೆಗೆ ಧ್ವನಿಯಾಗಿ 'ಮೂಕ ನಾಯಕ' ಪತ್ರಿಕೆ ಹೊರಡಿಸಿ ಆ ಮೂಲಕ ಸಂಶೋಧನೆಗೆ ಹೊಸ ಅಧ್ಯಾಯ ಪ್ರಾರಂಭಿಸಿದ ಹಿನ್ನೆಲೆಯ ಮಹತ್ವವನ್ನು ಉಲ್ಲೇಖಿಸಿದ್ದಾರೆ.

'ಸಂಶೋಧನೆ' ಎನ್ನುವ ೨ನೇ ಅಧ್ಯಾಯದಲ್ಲಿ ರೂಪ ನಿಷ್ಪತ್ತಿ, ಅರ್ಥ-ನಾಮಾಂತರ, ಉದ್ದೇಶ-ಸ್ವರೂಪ-ವ್ಯಾಪ್ತಿ, ಸಂಶೋಧನೆಗೆ ಕಾರಣಗಳು, Invest. Discovery. Research ಪದಗಳ ಅರ್ಥವ್ಯಾಪ್ತಿ, ಸಂಶೋಧನೆ ವಿಜ್ಞಾನ ? ಕಲೆಯೇ ?, ಸಾಹಿತ್ಯದಲ್ಲಿ ಸಂಶೋಧನೆ, ಸೃಜನ ಕ್ರಿಯೆ-ಸಂಶೋಧನೆ-ವಿಮರ್ಶೆಗಳ ಕುರಿತ ಚರ್ಚೆಯಿದೆ. ಕಲೆಯಲ್ಲಿ ಸಂಶೋಧನೆ ಕೆಲಸಮಾಡುವ ಬಗೆಯನ್ನು ಪ್ರೊ. ಎಸ್. ವಿ. ಪರಮೇಶ್ವರ ಭಟ್ಟ ಅವರು "ಎಲ್ಲ ವಿಜ್ಞಾನಗಳ ತಳಹದಿಯಾಗಿ ಒಂದು ಗಣಿತ ಶಾಸ್ತ್ರ ಪ್ರಜ್ಞೆ ಹೇಗೆ ಕೆಲಸ ಮಾಡುವುದರ ಅಗತ್ಯವಿದೆಯೋ ಹಾಗೆಯೇ ಎಲ್ಲ ಕಲೆಗಳ ತಳಹದಿಯಾಗಿ ಒಂದು ಸಂಶೋಧನ ಪ್ರಜ್ಞೆ ಕೆಲಸ ಮಾಡುವುದರ ಅಗತ್ಯವಿದೆಯೆಂದು ನಾನು ಭಾವಿಸುತ್ತೇನೆ" ಎಂಬುದಾಗಿ ನಿರೂಪಿಸಿರುವ ಸಂದರ್ಭ ಮತ್ತು ಅದರ ಔಚಿತ್ಯವನ್ನು ಗಮನಕ್ಕೆ ತಂದಿದ್ದಾರೆ ಒಂದು ಕೃತಿಯು ಸಂಶೋಧನೆಗೆ ತೊಡಗಿದಾಗ ನಡೆಯುವ ರೂಪಸ್ತರ, ಅರ್ಥಸ್ತರ, ತಾತ್ಪರ್ಯಸ್ತರಗಳ ಬಗೆಗಿನ ವಿವರಣೆ-ವಿವೇಚನೆಗಳೂ ಈ ಅಧ್ಯಾಯದಲ್ಲಿವೆ.

ಸಂಶೋಧಕನ ಅರ್ಹತೆಗಳು ಮತ್ತು ಗುಣಲಕ್ಷಣಗಳಿಗೆ ಸಂಬಂಧಿಸಿದಂತೆ ಅಧ್ಯಾಯ-೨ 'ಶ್ರಮಕ್ಕೆ ತಕ್ಕ ಶೋಧಕ ದೃಷ್ಟಿ'ಯ ಅಗತ್ಯ, ಆ ಮೂಲಕ ಪ್ರಚಲಿತ ಜ್ಞಾನಕ್ಕೆ ನೀಡಬಹುದಾದ ಕಾಣಿಕೆ, ಸಂಶೋಧಕ ಯಾಕೆ ಮತ್ತು ಹೇಗೆ ಪಂಡಿತ ಹಾಗೂ ಬಹುಮುಖಜ್ಞರಿಗಿಂತ ಭಿನ್ನ, ಹಾಗೆಯೇ ಪ್ರತಿಭೆ, ಅಭಿರುಚಿ ಮೊದಲಾದುವುಗಳ ಜೊತೆ ಇರಬೇಕಾದ ವೈಜ್ಞಾನಿಕ ಮನೋಭಾವ, ಅಪ್ಪಟ ಪ್ರಾಮಾಣಿಕತೆ, ಸ್ವಯಂ ವಿಮರ್ಶೆ, ಬಿಚ್ಚುಮನಸ್ಸು, ಕ್ಷೇತ್ರದ ಮಾಹಿತಿ, ಹಸ್ತಪ್ರತಿ ಪರಿಷ್ಕರಣೆಯ ಜ್ಞಾನ ಮೊದಲಾದವುಗಳ ಕುರಿತು ಬಹಳಷ್ಟು ಗಮನ ಸೆಳೆಯುತ್ತದೆ,

ಅಧ್ಯಯನ-೪, 'ಮಾರ್ಗದರ್ಶಕ'ರ ಬಗೆಗೆ ತಿಳಿಸುತ್ತದೆ. ಒಂದು ನಿರ್ದಿಷ್ಟ ವಿಶ್ವವಿದ್ಯಾನಿಲಯಕ್ಕೆ ಸಂಬಂಧಿಸಿದಂತೆ ಮಾರ್ಗದರ್ಶಿಗಳು ಹೊಂದಿರಬೇಕಾದ ಅರ್ಹತೆಗಳನ್ನು ಪಟ್ಟಿ ಮಾಡುತ್ತ "ಯಾವುದೇ ವ್ಯಕ್ತಿ ಪಿ. ಎಚ್. ಡಿ. ಪದವಿಯೊಂದಿಗೆ ವಿಶ್ವವಿದ್ಯಾನಿಲಯದಿಂದ ಮಾನ್ಯತೆಪಡೆದ ಸಂಶೋಧನ ಸಂಸ್ಥೆಯಲ್ಲಿ ಐದು ವರ್ಷ ಸಂಶೋಧನಾನುಭವವನ್ನೂ ಸಂಶೋಧನಾತ್ಮಕ ಪ್ರಕಟಣೆಗಳನ್ನೂ ಹೊಂದಿದ್ದರೂ ಮಾರ್ಗದರ್ಶನಕ್ಕೆ ಅರ್ಹನು" ಎನ್ನುವಂತಹ ನಿಯಮಗಳನ್ನು ಉಲ್ಲೇಖಿಸಿ ಸಂಶೋಧನೆಯ ಕೆಲಸ ಎಷ್ಟರಮಟ್ಟಿಗೆ ವಿಶ್ವವಿದ್ಯಾನಿಲಯ ಎಂಬ ದಂತಗೋಪುರದಿಂದ ಹೊರಗೂ ಸಾಧ್ಯವಾಗಬಲ್ಲುದು ಎಂಬುದರ ಕಡೆಗೂ ಕುತೂಹಲ ಕೆರಳಿಸಿದ್ದಾರೆ.

ಸಂಶೋಧಕನೊರ್ವ ಬಹಳಷ್ಟು ಎಚ್ಚರವಹಿಸಬೇಕಾದ 'ಸಂಶೋಧನೆಯ ಪ್ರಾಥಮಿಕ ಹಂತ'ಗಳ ಬಗೆಗೆ ಅಧ್ಯಾಯ-೫ ರಲ್ಲಿ ಸೋದಾಹರಣ ವಿವರಣೆಯಿದೆ. ಸಾಹಿತ್ಯ ಸಂಶೋಧನೆಯ ವಿವಿಧ ಮುಖಗಳಾದ ಆರು ಕ್ಷೇತ್ರಗಳನ್ನು ಉದಾಹರಿಸಿ ಮಾನವಿಕ, ಸಮಾಜ ಜ್ಞಾನ, ಮನೋವಿಜ್ಞಾನ, ಅರ್ಥ ಶಾಸ್ತ್ರ ಮೊದಲಾದವುಗಳ ಸಾರಲೇಖದಡಿಯಲ್ಲಿ ನಡೆಸಬಹುದಾದ 'ಅನ್ಯಜ್ಞಾನ ಕ್ಷೇತ್ರ'ವು ಸೇರ್ಪಡೆಗೊಂಡ ಹಿನ್ನೆಲೆಯಲ್ಲಿ ಸಂಶೋಧನ ಕ್ಷೇತ್ರಗಳ ಹೊಸ ಸಾಧ್ಯತೆಗಳನ್ನು ತೋರಿಸಿಕೊಟ್ಟಿದ್ದಾರೆ. ಊಹನಾ ಸಿದ್ಧಾಂತದ ಪರಿಕಲ್ಪನೆ, ಲಕ್ಷಣ, ಪ್ರಕಾರ, ಉಪಯೋಗ, ಊಹೆ ಮತ್ತು ಕಲ್ಪನೆಗಳಲ್ಲಿನ ಅಂತರ, ಸಂಶೋಧನೆಯ ರೂಪರೇಖೆ, ವಿಧಿಗಳು, ರೂಪರೇಖೆಗೆ ಮೊದಲು ಆಲೋಚಿಸಬೇಕಾದ ಅಂಶಗಳು, ಪರಾಮರ್ಶನ ಗ್ರಂಥ ಸೂಚಿ, ಸಂಶೋಧನೆಯ ಅಂತಿಮ ಹಂತ, ಸೇರ್ಪಡೆ ಮತ್ತು ಕೈ ಬಿಡುವಿಕೆಗಳ ಮೂಲಕ ಪರಿಷ್ಕಾರಗೊಳ್ಳುವಿಕೆ ಮೊದಲಾದವುಗಳ ಕುರಿತು ಸ್ಪಷ್ಟಪಡಿಸಿದ್ದಾರೆ.

ಅಧ್ಯಾಯ-೬ ರಲ್ಲಿ, 'ವಿಷಯ ಸಂಗ್ರಹಣೆ- ಆಕರಗಳ ಮೂಲ ಸಾಮಗ್ರಿ ಮತ್ತು ಆನುಷಂಗಿಕ ಸಾಮಗ್ರಿ, ಪ್ರಾಮಾಣಿಕ ಮತ್ತು ಅಪ್ರಾಮಾಣಿಕ ಆಕರ ಸಾಮಾಗ್ರಿಗಳಲ್ಲಿ ಪ್ರತ್ಯಕ್ಷ ದರ್ಶಿಯ ಹೇಳಿಕೆ, ಭಾವುಕ ಹೇಳಿಕೆ, ಪಾಕ್ಷಪದೃಷ್ಟಿಯ ಆಕರಗಳು, ಸಂಶೋಧಕನಲ್ಲಿರಬೇಕಾದ ನಿರ್ಲಿಪ್ತತೆ ಮೊದಲಾದವುಗಳ ಸಮೀಕ್ಷೆ ಹಾಗೂ ಚರ್ಚೆಯಿದೆ.

ಕ್ಷೇತ್ರಕಾರ್ಯದ ವ್ಯಾಪ್ತಿಯಲ್ಲಿ ಬರುವ ಸಂಗ್ರಹಾಲಯಗಳಿಂದ ಹಾಗೂ ವ್ಯಕ್ತಿಗಳಿಂದ ನಡೆಸಬಹುದಾದ ಕ್ಷೇತ್ರ ಕಾರ್ಯಾಚರಣೆ, ಪ್ರಶ್ನಾವಳಿ ಮತ್ತು ಸಂದರ್ಶನ ಅವುಗಳ ಪ್ರಕಾರಗಳು, ಪ್ರಶ್ನಾವಳಿಯ ಗುಣದೋಷಗಳು. ಸಂದರ್ಶನದ ಇತಿಮಿತಿ, ಸಂದರ್ಶಕ- ಮಾಹಿತಿದಾರ- ಸಂದರ್ಶನಗಳ ಮಹತ್ವ, ಅವಲೋಕನೆಯ ವಿವಿಧ ನಮೂನೆಗಳು ಮುಂತಾದ ವಿಚಾರಗಳು ಅಧ್ಯಯನ-೭ ರಲ್ಲಿ. ಈ ಕ್ಷೇತ್ರದಲ್ಲಿ ಲೇಖಕರಿಗಿರುವ ಅಪೂರ್ವ ಹಾಗೂ ಅಪಾರ ಅನುಭವಗಳ ಮೂಲಕ ವ್ಯವಸ್ಥಿತವಾಗಿ ಮೂಡಿಬಂದಿವೆ.

ಸಾಮಗ್ರಿ ಸಂಗ್ರಹಣೆಯ ವಿಧಾನ, ವರ್ಗೀಕರಣ ಮತ್ತು ವಿಶ್ಲೇಷಣೆ (ಅಧ್ಯಾಯ-೮) ವಿಭಾಗದಲ್ಲಿ ಟಿಪ್ಪಣಿ ಪುಸ್ತಕ ಮತ್ತು ಬಿಡಿಹಾಳೆಗಳ ಮಿತಿಗಳನ್ನು ತಿಳಿಸಿ ಯಾಕೆ ಪಟ್ಟಿಕೆಗಳು ಬಹು ಅನುಕೂಲಕರ ಹಾಗೂ ವೈಜ್ಞಾನಿಕ ಎನ್ನುವುದನ್ನು ಸ್ಪಷ್ಟಪಡಿಸಲಾಗಿದೆ. ಸಂಗ್ರಹಿತ ಸಾಮಗ್ರಿಯ ವರ್ಗೀಕರಣ ಮತ್ತು ವಿಶ್ಲೇಷಣೆ, ಪರಿಷ್ಕರಣ, ಸಂಕೇತೀಕರಣ, ಸಾರಣೀಕರಣ ಕಾರ್ಯಗಳ ಮಹತ್ವವನ್ನು ಒತ್ತಿ ಹೇಳಲಾಗಿದೆ. ನಿಬಂಧಕಾರ ತನ್ನ ಶ್ರದ್ಧೆ, ತಾಳ್ಮೆಗಿಂತಲೂ ಸಾಕಲ್ಯ ದೃಷ್ಟಿ (synoptic view), ಮತ್ತು ನಿರ್ಣಯ ಶಕ್ತಿ (Critical judgement) ಗಳೊಂದಿಗೆ, ದೊರೆತ ಸಾಮಗ್ರಿಯನ್ನು ಇತರ ಬಾಹ್ಯ ಪ್ರಮಾಣದೊಂದಿಗೆ ಒರೆಗೆ ಹಚ್ಚಿ ಅವುಗಳ ಚಾರಿತ್ರಿಕ ತಥ್ಯ (Historical Veracity) ವನ್ನು ಕಂಡು ಹಿಡಿಯುವಲ್ಲಿ ತೋರಬೇಕಾದ ವಸ್ತುನಿಷ್ಠೆ (objectivity) ಮೊದಲಾದುವುಗಳನ್ನು ವಿವೇಚಿಸಲಾಗಿದೆ.

ಮಹಾ ಪ್ರಬಂಧದ ವಿನ್ಯಾಸದಲ್ಲಿ (ಅಧ್ಯಾಯ ೯) ಶೀರ್ಷಿಕೆ. ಅರಿಕೆ, ಸಂಕೇತ ಸೂಚಿ, ಪರಿವಿಡಿ, ಪ್ರಕರಣ, ಪರಿಶಿಷ್ಟ–ಅನುಬಂಧಗಳ ಬಗೆಗೆ ಹೇಳುತ್ತ ಅನುಬಂಧದ ವ್ಯಾಪ್ತಿಯಲ್ಲಿ ಬರಬಹುದಾದ ಅಕಾರಾದಿ, ಶಬ್ದಸೂಚಿ, ಪಾರಿಭಾಷಿಕ ಪದ ಸೂಚಿ, ಆಧಾರ ಗ್ರಂಥಗಳು, ಒಪ್ಪೋಲೆಗಳನ್ನು ಸಿದ್ಧಪಡಿಸುವ ವಿಧಾನಗಳನ್ನು ಚರ್ಚಿಸಿದ್ದಾರೆ. ಇಂಗ್ಲಿಷಿನ Index ಪದಕ್ಕೆ ಬದಲಾಗಿ ಬಳಕೆಗೊಳ್ಳುವ ಪರಿಶಿಷ್ಟ ಮತ್ತು ಅನುಬಂಧ ಪದಗಳ ಅರ್ಥ ವ್ಯತ್ಯಾಸಗಳನ್ನು ಸಾಧಾರವಾಗಿ ಸ್ಪಷ್ಟಪಡಿಸಿ ಕೆಲವು ಅಧ್ಯಯನಕಾರರು ಈ ಪದಗಳನ್ನು ದುರ್ಬಳಸಿಕೊಂಡ ಸಂದರ್ಭಗಳನ್ನು ಉದಾಹರಿಸಿದ್ದಾರೆ.

ಹತ್ತನೆಯ ಅಧ್ಯಾಯದಲ್ಲಿ ಸಂಶೋಧನೆಯ ಪ್ರಕಾರಗಳ ಬಗೆಗೆ ತಿಳಿಸುತ್ತಾರೆ. ಸಾಮಗ್ರಿಗಳನ್ನು ಅರ್ಥೈಸುವ ರೀತಿ ಮತ್ತು ಸಾಮಗ್ರಿಗಳು ಹೊರಸೂಸುವ ಅರ್ಥಗಳ ಮೇಲಿಂದ ಸಾಮಗ್ರಿ ಮುಖಿ, ವಿವರಣ ಮುಖಿ, ವಿಶ್ಲೇಷಣ ಮುಖಿ ಸಂಶೋಧನೆಗಳೆಂದೂ, ಐತಿಹಾಸಿಕ, ಸಾಮಾಜಿಕ, ತುಲನಾತ್ಮಕ, ಮನೋವೈಜ್ಞಾನಿಕ ಮುಂತಾದ ಸಂಶೋಧನೆಗಳೆಂದೂ ಗುರುತಿಸಲಾಗಿರುವ ಎರಡು ಮುಖ್ಯ ವರ್ಗಗಳನ್ನು ಉಲ್ಲೇಖಿಸುತ್ತಾರೆ. ಇವುಗಳ ಜತೆಗೆ ಕೇಸ್ ಸ್ಟಡಿ, ಮಾರ್ಕ್ಸ್‌ಸಿದ್ಧಾಂತ ಮತ್ತು ಬಹುಶಾಸ್ತ್ರೀಯ ಸಂಶೋಧನೆಗಳ ಕುರಿತು ಚರ್ಚಿಸುತ್ತ ಯಾವುದೇ ಸಂಶೋಧನೆ ಸಮಗ್ರ ಎನ್ನಿಸಿಕೊಳ್ಳಬೇಕಾದರೆ ಅದನ್ನು ನೋಡಬೇಕಾದ ಬಹುಮುಖ್ಯವೆನಿಸಿರಬೇಕಾದ ಅಂತಶ್ಶಾಸ್ತ್ರೀಯ ವಿಧಾನ (Interdisciplinary approach) ಅಧ್ಯಯನದ ಅಗತ್ಯ ಮತ್ತು ಅದರ ಮಹತ್ವದ ಬಗಗೆ ತಮ್ಮ ಆಲೋಚನೆಗಳನ್ನು ಲಭ್ಯ ದಾಖಲೆಗಳ ಮೂಲಕ ಮುಂದಿಡುತ್ತಾರೆ.

ಕವಿಯ ಕಾಲ, ದೇಶ, ಚರಿತ್ರೆ, ಕೃತಿ-ಸಂಖ್ಯೆ–ರಚನಾಕ್ರಮ ಸ್ವರೂಪ (ಅಧ್ಯಾಯ ೧೧)ಗಳ ಬಗೆಗೆ ತಾಳುವ ನಿಲುವು, ಕೊಡುವ ತೀರ್ಮಾನಗಳಿಗಾಗಿ ಸಂಶೋಧಕ ಲಭ್ಯ ಮೂಲಗಳ ಮೂಲಕ ನಡೆಸಬಹುದಾದ ಹುಡುಕಾಟ ಹೇಗಿರಬೇಕು ಎನ್ನುವುದನ್ನು ಸಾಧಾರವಾಗಿ ಡಾ. ಶಿರೂರ ಚರ್ಚಿಸಿದ್ದಾರೆ.

ಸಾರಲೇಖ (synopsis), ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಸಂಶೋಧನೆಯ ವಿಧಾನ, ಭಾಷೆ, ಉದ್ಧರಣೆ ಮತ್ತು ಅಡಿ ಟಿಪ್ಪಣಿ, ಅವುಗಳ ಅರ್ಹತೆ-ಅನರ್ಹತೆ, ಪ್ರಯೋಜನ ಬಳಸಿಕೊಳ್ಳುವ ಕ್ರಮ ಅಥವಾ ವಿಧಾನ, ಸಂಶೋಧನ ಪ್ರಬಂಧದ ಮೌಲ್ಯಮಾಪನ ಮೊದಲಾದುವುಗಳನ್ನು 'ಇತರ' ಎನ್ನುವ ಅಧ್ಯಾಯ (೧೨) ವೊಂದರಲ್ಲಿ ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಸಂಶೋಧನೆಯಲ್ಲಿ ಸಂಶೋಧಕನೋರ್ವ ಬಹುಮುಖ್ಯವಾಗಿ ಗಮನಿಸಬೇಕಾದ್ದು ತಾನು ಮಂಡಿಸುವ ಭಾಷೆಯ ಬಗೆಗೆ ಸೃಜನಾತ್ಮಕ ಸಾಹಿತ್ಯರಚನಾ ಭಾಷಾ ಶೈಲಿಗೆ ಸಂಶೋಧನೆಯಲ್ಲಿ ಸ್ಥಾನವಿಲ್ಲ. ವಿಚಾರಗಳು ತರ್ಕಬದ್ಧವಾಗಿ, ವಿಶ್ವಾಸನೀಯವಾಗಿ ಇರಬೇಕಾದ್ದರಿಂದ ಅವು ಅರ್ಥವಾಗುವ ಹಾಗೆ ಸ್ಪಷ್ಟ, ಸರಳ, ನೇರವಾಗಿದ್ದರೆ ಸಾಕು. ಪದ ಪ್ರೌಢಿಮೆಯ ಪ್ರದರ್ಶನಕ್ಕಿಂತ ಒಟ್ಟಾರೆಯಾಗಿ ಸ್ಪಷ್ಟತೆ ಸೌಷ್ಠವತೆ, ನಿರ್ದಿಷ್ಟತೆ, ಅಸಂದಿಗ್ಧತೆ, ಇವು ಒಳ್ಳೆಯ ಪ್ರಬಂಧದ ಲಕ್ಷಣಗಳು. ಇಂತಹ ಸಲಹೆ-ಸೂಚನೆಗಳನ್ನು ಈ ವಿಭಾಗದಿಂದ ಸಾಕಷ್ಟು ಪಡೆದುಕೊಳ್ಳಬಹುದಾಗಿದೆ.

ಕರ್ನಾಟಕದಲ್ಲಿ ಇದುವರೆಗೆ ನಡೆದಿರುವ ಸಂಶೋಧನೆ–ಅಧ್ಯಯನಗಳ ಕುರಿತ ಒಂದು ಸ್ಥೂಲ ಸಮೀಕ್ಷೆಯನ್ನು 'ಕರ್ನಾಟಕದಲ್ಲಿ ಸಂಶೋಧನೆ' ಎನ್ನುವ ಕೊನೆಯ ಅಧ್ಯಾಯ (೧೩)ದಲ್ಲಿ ಮಾಡಿಕೊಡಲಾಗಿದೆ. ಇದೊಂದು ಉಪಯುಕ್ತ ಅಧ್ಯಯನ ಲೇಖನವೇ ಆಗಿದೆ.

ಡಾ. ಶಿರೂರ ಅವರು ಕೊನೆಯಲ್ಲಿ ಕೆಲವು ಅನುಬಂಧಗಳನ್ನು ಸಂಕಲಿಸಿದ್ದಾರೆ. ಅನುಬಂಧ–೧ ರಲ್ಲಿ ಮಾನವ ಕುಲ, ಸಾಮಾಜಿಕ ವಿಜ್ಞಾನ ಮತ್ತು ನೈಸರ್ಗಿಕ ವಿಜ್ಞಾನಗಳಲ್ಲಿ ಅಲ್ಪಾವಧಿಯ ಮತ್ತು ಚಿಕ್ಕಪುಟ್ಟ ಸಂಶೋಧನ ಕಾರ್ಯಗಳನ್ನು ಕೈಗೊಳ್ಳಲು ವಿಶ್ವವಿದ್ಯಾನಿಲಯದ ಧನ ಸಹಾಯ ಆಯೋಗವು ೧೯೬೫ ರಿಂದ ೧೯೭೯ ರ ವರೆಗೆ ನೀಡಿರುವ ಹಣ ಕಾಸಿನ ಪಟ್ಟಿಯನ್ನು ಕೊಡಲಾಗಿದೆ.

ಅನುಬಂಧ ೨ ರಲ್ಲಿ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿ ಭಾರತದ ವಿವಿಧ ವಿಶ್ವವಿದ್ಯಾನಿಲಯಗಳು ಸ್ವೀಕರಿಸಿರುವ ಮಹಾ ಪ್ರಬಂಧಗಳನ್ನು ಅಚ್ಚುಕಟ್ಟಾಗಿ ವ್ಯವಸ್ಥಿತವಾಗಿ ಕ್ರಮಪೂರ್ಣವಾಗಿ ಶೇಖರಿಸಿ ಕೊಡಲಾಗಿದೆ. ಜೊತೆಗೆ ಅವುಗಳಲ್ಲಿ, ಪ್ರಕಟವಾಗಿರುವ ಕೃತಿಗಳನ್ನು ಸೂಚಿಸಲಾಗದೆ. ಈ ಯಾದಿ ಅಪೂರ್ಣವಾಗಿರಬಹುದಾದರೂ ಅತ್ಯಂತ ಈಚೆಗಿನ (೧೯೮೨) ಸ್ವೀಕೃತಿ ಕೂಡ ಇಲ್ಲಿ ದಾಖಲಾಗಿದೆ. ಮಾಹಿತಿಗಳ ದೃಷ್ಟಿಯಿಂದಲೂ ಅತ್ಯಂತ ಮೌಲಿಕವಾದ ಅಧ್ಯಾಯವಿದು.

ಇಷ್ಟಾಗಿಯೂ 'ಸಂಶೋಧನ ಸ್ವರೂಪ'ವನ್ನು ಒಂದು 'ಸಂಶೋಧನ ಶಾಸ್ತ್ರ' ಗ್ರಂಥವಾಗಿ ಪರಿಗಣಿಸಬೇಕಾದ ಸಂದರ್ಭದಲ್ಲಿ ಅದು ಕೆಲವು ಸಾಮಾನ್ಯ ದೌರ್ಬಲ್ಯ ಹಾಗೂ ಮಿತಿಗಳಿಂದ ಹೊರತಾಗಿಲ್ಲ ಎನ್ನಬೇಕಾಗಿದೆ. ಕೃತಿಯಲ್ಲಿ ಹಲವೆಡೆ ಅಲ್ಲಲ್ಲಿ ಬಹಳಷ್ಟು ಅಕ್ಷರ ದೋಷಗಳೂ (ಮುದ್ರಣ ದೋಷ ?) ಉಳಿದು ಹೋಗಿವೆ.

**ಅನುಬಂಧ--೩** ಆಗಬಹುದಾಗಿದ್ದ **ಆಧಾರಗ್ರಂಥಗಳು** ವಿಭಾಗದಲ್ಲಿ ಅನುಬಂಧ ೧ ರಲ್ಲಿನ ಅಡಿಟಿಪ್ಪಣಿಯಲ್ಲಿ ಸೂಚಿಸಿರುವ ಗ್ರಂಥವನ್ನು ಕಾಣಿಸಬೇಕಾಗಿತ್ತು. ಹಾಗೆಯೇ ಪು ೧೯೪ ರಲ್ಲಿ ಉದ್ಧರಿಸಿಕೊಂಡ ಭಾಗಕ್ಕೆ ನೆರವಾದ ಇಂಗ್ಲಿಷ್ ಗ್ರಂಥದ ಹೆಸರೂ ಸೇರಬೇಕಾಗಿತ್ತು. ಹೀಗೆ ಸೇರ್ಪಡೆಯಾಗಬೇಕಾದ ಕೃತಿಗಳು ಇನ್ನೂ ಇವೆ.

ಅಧ್ಯಾಯ-೧೩ ರಲ್ಲಿ ನೀಡಲಾಗಿರುವ ಬಹುಪಾಲು ವಿಷಯಗಳು ಅನುಬಂಧ ೨ ರಲ್ಲಿ ಪುನರಾವರ್ತನೆಯಾಗುವುದನ್ನು ತಪ್ಪಿಸಬಹುದಿತ್ತೆನಿಸುತ್ತದೆ. ಸಂಶೋಧನ ಶಾಸ್ತ್ರ ಗ್ರಂಥವೊಂದನ್ನು ಸಿದ್ಧಪಡಿಸುವ ಕಾಲಕ್ಕೆ ಇಂತಹ ದೋಷಗಳನ್ನು ನಿವಾರಿಸಿಕೊಳ್ಳಬೇಕಾಗಿತ್ತು. ಅದೂ ಪರಿಷ್ಕಾರ ಪಡೆದ ಆವೃತ್ತಿ ಬೇರೆ. ಆಧಾರ ಅಥವಾ ಪ್ರಮಾಣ ಗ್ರಂಥವೊಂದರಲ್ಲಿ ಆಗಿರಬಹುದಾದ ದೋಷಗಳು ಮುದ್ರಣ ದೋಷಗಳಿಂದಾಗಿ ಅಥವಾ ಇನ್ನು ಯಾವುದೇ ಕಾರಣದಿಂದ ಎನ್ನುವುದಕ್ಕಾಗಿ ರಿಯಾಯಿತಿ ಪಡೆಯಬಾರದು.

ಈ ಗ್ರಂಥದ ಒಂದು ಹೆಚ್ಚುಗಾರಿಕೆಯೆಂದರೆ ಆರಂಭದಿಂದ ಕೊನೆಯುವರೆಗೂ ಸಂದರ್ಭ ಬಂದಾಗಲೆಲ್ಲ ಉದಾಹರಣೆಗಳನ್ನು ನಡೆದಿರುವ ಸಂಶೋಧನೆಗಳಿಂದಲೇ ಎತ್ತಿಕೊಂಡಿರುವುದು ಹಾಗೂ 'ಸಂಶೋಧನ ಸ್ವರೂಪ.' ಸಂಶೋಧನ ಶಾಸ್ತ್ರ ಗ್ರಂಥವಾಗಿರುವುದರ ಜೊತೆಯಲ್ಲೇ ಒಂದು ಅಧ್ಯಯನ ಗ್ರಂಥವೂ ಆಗಿರುವುದು. ಈ ನಿಟ್ಟಿನಲ್ಲಿ ಡಾ. ಚಿದಾನಂದ ಮೂರ್ತಿ ಅವರು (೧೯೬೭, ೮) ತಮ್ಮ 'ಸಂಶೋಧನೆ' ಗ್ರಂಥದಲ್ಲಿ ಹೇಳಿದ 'ಮಾನಸಿಕ ಶ್ರಮಜೀವಿಯಾದ ಸಂಶೋಧಕನೋರ್ವನ ವ್ಯವಸ್ಥಿತ ಶ್ರಮ'ಕ್ಕೆ ಇಲ್ಲೊಂದು ಉದಾಹರಣೆ ಸಿಗುತ್ತದೆ. ಅಲ್ಲದೆ ಈ ಕ್ಷೇತ್ರದಲ್ಲಿ ಇದೊಂದು ಸಾಕಷ್ಟು ಮಾಹಿತಿ ಒದಗಿಸುವ ಮೂಲಭೂತ ಆಕರಗ್ರಂಥವಾಗಿ ಕೂಡ ಉಳಿಯುತ್ತದೆ.

ಸಂಶೋಧನೆ ಎನ್ನುವುದು ಇಂದು ಕೇವಲ ವಿಶ್ವವಿದ್ಯಾನಿಲಯದ ಸೀಮಿತ ಪರಿಧಿಯೊಳಗೆ ಮಾತ್ರ ನಡೆಯುವ ಕೆಲಸವಾಗಿಲ್ಲ. ಅದು ಅನೇಕ ಇತರ ಆಯಾಮಗಳಲ್ಲಿ, ಮಾಧ್ಯಮಗಳಲ್ಲಿ, ವೈಯುಕ್ತಿಕ ನೆಲೆಗಳಲ್ಲಿ ಸಾಗುತ್ತಿರಬಹುದು. ಇಂತಹ ಕಾರಣಗಳಿಗಾಗಿಯೂ ಜೊತೆಗೆ ಸಂಶೋಧನ ವಿದ್ಯಾರ್ಥಿಗಳ ಮಾರ್ಗದರ್ಶಕ ದೃಷ್ಟಿಯಿಂದಲೂ **ಸಂಶೋಧನ ಸ್ವರೂಪ** ಬಹು ಮುಖ್ಯವಾಗುತ್ತದೆ. ●

## ನ್ಯಾಯ: ಕೋರಗಲ್ ವಿರೂಪಾಕ್ಷಪ್ಪ

(ಸಂಕ್ರಮಣ ಪ್ರಕಾಶನ, ಧಾರವಾಡ; ೧೯೮೦);

ಕೋರಗಲ್ ವಿರೂಪಾಕ್ಷಪ್ಪ ಅವರ 'ನ್ಯಾಯ' ಮೊದಲ ಕಥಾ ಸಂಕಲನವಾಗಿದ್ದರೂ ಇಲ್ಲಿನ ಎಲ್ಲ ಕಥೆಗಳ ಹಿಂದೆ ಪಕ್ವ ವ್ಯಕ್ತಿತ್ವವೊಂದಿದೆ. ರಾಯಚೂರು ಜಿಲ್ಲೆಯ ಕೊಪ್ಪಳದ ಸುತ್ತಮುತ್ತಲಿನ ಗ್ರಾಮೀಣ ಬದುಕು ಇಲ್ಲಿನ ಕಥೆಗಳಲ್ಲಿ ನಿಚ್ಚಳವಾಗಿ ಪ್ರಕಟಗೊಂಡಿದೆ. ಆ ಪ್ರದೇಶದ ಭಾಷೆಯ ಸೊಗಡನ್ನೂ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಹಾಗಾಗಿ ಪ್ರಸ್ತುತ ಕೃತಿ ಪ್ರಾದೇಶಿಕತೆಯ ಲಕ್ಷಣವನ್ನೂ ಪಡೆದುಕೊಳ್ಳುತ್ತದೆ.

ಅಜ್ಞ ಮಹಿಳೆಯರ ಮೌಢ್ಯವನ್ನೇ ಬಂಡವಾಳವಾಗಿಸಿಕೊಂಡು, ನಿಧಿ ಪತ್ತೆ ಹಚ್ಚಿಕೊಡುವ ಆಟ ಕಟ್ಟಿ, ಹಣ ದೋಚುವ ದುಷ್ಟವೃತ್ತಿಯಲ್ಲಿ ತೊಡಗುವ ಅಂಜನಪ್ಪ (ನಿಧಿ); ಕಾವಿ ಧರಿಸಿ ವೇಷದಲ್ಲಿ ಜಿತೇಂದ್ರಿಯನಾದರೂ, ಅಂತರಂಗದಲ್ಲಿ ಇಂದ್ರಿಯ ಶರಣನಾಗಿ ತೋರಿಕೆಯ ಸನ್ಯಾಸವನ್ನು ಮೆರೆಯುವ ಶಾಂತರುದ್ರಸ್ವಾಮಿ (ವೇಷಗಾರರು); ಮುಗ್ಧ ಹೆಣ್ಣು, ಕುರುಡಿ ಚನ್ನವ್ವನ ಮೇಲೆ ಅತ್ಯಾಚಾರ ಮಾಡಲು ಪ್ರಯತ್ನಿಸುವ ಚನ್ನವೀರ (ತಾಯಿತ); ಹೆಂಡತಿಯನ್ನು ಕಳೆದುಕೊಂಡು ಗಂಡ ಸತ್ತ ಹೆಣ್ಣೊಂದರೊಡನೆ ಊರೇ ಕಾಣುವಂತೆ ತಾನು ಚೆಲ್ಲಾಟವಾಡುತ್ತಿದ್ದು, ಚಿಕ್ಕ ವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡ ಹೆಣ್ಣೊಂದು ತನ್ನ ಕೈ ಹಿಡಿಯಲು ಮುಂದೆ ಬಂದ ಗಂಡಿನೊಡನೆ ಸಂಬಂಧ ಬೆಳೆಸಿಕೊಂಡುದನ್ನು ತಪ್ಪು ಎಂದು ನ್ಯಾಯ ಹೇಳಲು ಮುಂದಾಗುವ ಈರಭದ್ರಗೌಡ (ನ್ಯಾಯ)—ಇಂಥವರು ನಮ್ಮ ಹಳ್ಳಿಗಳ ನೈಜ ಬದುಕಿನ ಇನ್ನೊಂದು ಮುಖವೇ ಆಗಿ ಆ ಬದುಕಿನೊಡನೆ ಬೆರೆತುಹೋಗಿರುವ ದುಷ್ಟಶಕ್ತಿಗಳು. ವಿರೂಪಾಕ್ಷಪ್ಪನವರು ಇವರ ಮುಖವಾಡವನ್ನು ಕಿತ್ತು ನಿರ್ಭಯವಾಗಿ ಹೊರಗೆಳೆದಿದ್ದಾರೆ ಮತ್ತು ಲೇವಡಿಗೆ ಗುರಿ ಮಾಡಿದ್ದಾರೆ. ಬಂಡಾಯ ಸಾಹಿತ್ಯ ಸಾಮಾಜಿಕ ಕಳಕಳಿಯನ್ನು ಪ್ರಾಮುಖ್ಯಗೊಳಿಸುತ್ತಲೇ ಹೇಗೆ ಕಲಾವಂತಿಕೆಯನ್ನು ಮೆರೆಯುತ್ತದೆ ಎಂಬುದಕ್ಕೆ ಈ ಕಥೆಗಳು ಒಳ್ಳೆಯ ನಿದರ್ಶನವಾಗುತ್ತವೆ.

ಗೊಂದಲ ಕೋಲಾಹಲಗಳನ್ನು ಮೈಗೂಡಿಸಿಕೊಂಡ ನಗರಗಳು ಹಳ್ಳಿಗಾಡಿನ ಜನರ ಮೃದುತ್ವ, ಮುಗ್ಧತೆಗಳನ್ನು ದುರುಪಯೋಗಪಡಿಸಿಕೊಂಡು ಅವರನ್ನು ಸುಲಿಯುವ ಕಾರ್ಯವನ್ನೂ ರೂಢಿಸಿಕೊಂಡಿವೆ. ನಗರಗಳಲ್ಲಿ ಬೆಳೆದವರಂತೆ ಕಾಣುವ ಯುವಕರು ಹಳ್ಳಿಗರನ್ನು ಸುಲಿಯುವ ತಂತ್ರವನ್ನು ರೂಢಿಸಿಕೊಂಡ ಬಗೆಯನ್ನು ವಿವರಿಸುವ ಮೂಲಕ (ಪ್ರೀತಿ-ಪ್ರೇಮ-ಬದುಕು) ಕಥೆಗಾರರು ಇದನ್ನು ತೋರಿಸಿಕೊಟ್ಟಿದ್ದಾರೆ,

ಆದರೆ ಇಲ್ಲಿನ ಘಟನೆಗಳು ಸಹಜತೆಯನ್ನು ಮೀರಿದ ಕಾರಣಕ್ಕಾಗಿ ಓದುಗರ ವಿಶ್ವಾಸವನ್ನು ಕಳೆದುಕೊಳ್ಳುತ್ತವೆ.

ಶಾಂತರುದ್ರಸ್ವಾಮಿಯ ಕಾಮದ ಕಣ್ಣಿಗೆ ವಿಷಯವಾದ ಚಿಕ್ಕಮ್ಮ ಊರವರ ಕ್ರೋಧಕ್ಕೆ ಒಳಗಾಗಿ ಬೆತ್ತಲಾಗಬೇಕಾದ ಪ್ರಸಂಗವೊದಗುತ್ತದೆ (ವೇಷಗಾರರು). ಈ ಪ್ರಸಂಗವನ್ನು ದೊಡ್ಡದು ಮಾಡಿ ಶಾಸನಸಭೆಯವರೆಗೂ ಒಯ್ದು ಪ್ರಚಾರ ಗಿಟ್ಟಿಸಿ ಕೊಂಡ ಹೋರಾಟಗಾರರು ಚಿಕ್ಕಮ್ಮನ ಮುಗ್ಧ ಕುಟುಂಬವನ್ನು ಬಳಸಿಕೊಂಡ ಬಗೆ ವಿಷಾದನೀಯ. ನಗರಗಳಲ್ಲಿ ಮೊಳೆ ಜಡಿದುಕೊಂಡು ಸುಧಾರಣೆ, ಹೋರಾಟದ ಮಾರ್ಗ ಹಿಡಿದು, ಕೀರ್ತಿಕಾಮಿನಿಯ ಬೆನ್ನು ಹತ್ತಿದ ಕಪಟ ಹೋರಾಟಗಾರರ ಡಾಂಭಿಕತೆಯನ್ನು ಇಲ್ಲಿ ಅನಾವರಣಗೊಳಿಸಿದ್ದು ಯುಕ್ತವೇ ಆಗಿದೆ.

'ಗಿಣಿ ಗಿಣಿ ರಾಮ,' 'ನಾನು ಕುಬ್ಜ ನಾನು ಕಿರಿಯ'–ಇವು ವಿರುಪಾಕ್ಷಪ್ಪನವರ ಕಲೆ ಗಾರಿಕೆಯನ್ನು ಪ್ರತಿನಿಧಿಸುವ ಒಳ್ಳೆಯ ಕಥೆಗಳು. ಹೆಸರು ಸ್ವಲ್ಪ ಮುಜುಗರವನ್ನುಂಟು ಮಾಡಿದರೂ ಸಾಂಕೇತಿಕ ನಿರೂಪಣೆಯಿಂದಾಗಿ ಗಮನ ಸೆಳೆಯುವ ಕಥೆ 'ಗಿಣಿ ಗಿಣಿ ರಾಮ,' ವಾಚ್ಯ ನಿರೂಪಣೆಯಿಂದಾಗಿ ಒಂದೆರಡು ಕಡೆ ಸಾಂಕೇತಿಕತೆಗೆ ಭಂಗ ಬಂದಿದೆ ಎಂಬುದನ್ನು ಬಿಟ್ಟರೆ ಉಳಿದಂತೆ ಕಲೆಗಾರಿಕೆಯ ಒಳ್ಳೆಯ ಲಕ್ಷಣಗಳನ್ನು ಮೆರೆಯುತ್ತಾ ಸಾಗುತ್ತದೆ. ಸಂವೇದನಶೀಲ ಮನಸ್ಸೊಂದು ಅನುಭವಗಳಿಗೆ ಪ್ರತಿ ಕ್ರಿಯಿಸುವ ವಿಧಾನಗಳನ್ನು ಕಲಾತ್ಮಕವಾಗಿ ಸೆರೆಹಿಡಿಯುವ ಪ್ರಯತ್ನ 'ನಾನು ಕುಬ್ಜ ನಾನು ಕಿರಿಯ'ದಲ್ಲಿದೆ.

ಸಂಕ್ಷಿಪ್ತತೆ ಇಲ್ಲಿನ ಕಥೆಗಳಲ್ಲಿ ಕಂಡುಬರುವ ಇನ್ನೊಂದು ಮುಖ್ಯಾಂಶ. ಎಲ್ಲ ಕಥೆ ಗಳೂ ಹೇಳಿ ಮಾಡಿಸಿದಂತೆ ಎಂಟು–ಹತ್ತು ಪುಟಗಳಲ್ಲಿ ಮುಕ್ತಾಯಗೊಳ್ಳುತ್ತವೆ, ಸಾಧಾರಣ ಬರಹಗಾರನಲ್ಲಿ ಇದೊಂದು ದೋಷವಾಗಿ ಪರಿಣಮಿಸಬಹುದಿತ್ತು. ಆದರೆ ವಿರುಪಾಕ್ಷಪ್ಪನವರಲ್ಲಿ ಹಾಗಾಗುವುದಿಲ್ಲ. ಮೊದಲೇ ಹೇಳಿದಂತೆ ಅವರ ಗಾಢ ಅನು ಭವ ಹಾಗೂ ಭಾಷಾ ಪ್ರೌಢಿಮೆಯ ಹಿನ್ನೆಲೆಯಲ್ಲಿ ಈ ಕಥೆಗಳು ತಮ್ಮ ಬಂಧುರತೆ ಯನ್ನು ಕಾಪಾಡಿಕೊಂಡು ಒಂದು ಮಿತಿಯಲ್ಲಿ ದೋಷಮುಕ್ತವಾಗಿದೆ. ಭಾಷೆಯ ದುಂದುಗಾರಿಕೆ ಈ ಕಥೆಗಳಲ್ಲಿ ಕಾಣದಿರುವುದಕ್ಕೆ ಅವುಗಳ ಸಂಕ್ಷಿಪ್ತತೆಯೂ ಒಂದು ಕಾರಣ. ಒಟ್ಟಿನಲ್ಲಿ ವಿರುಪಾಕ್ಷಪ್ಪನವರದು ಸಣ್ಣ ಕಥೆ ಪ್ರಕಾರಕ್ಕೆ ಒಗ್ಗಿದ ಕೈ. ಅವರ ಮುಂದಿನ ಬರಹಗಳನ್ನು ಕುತೂಹಲದಿಂದ ನಿರೀಕ್ಷಿಸಬಹುದಾಗಿದೆ. ತಮ್ಮ ಕಥೆಗಳ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು, ಬದುಕಿನ ಸಂಕೀರ್ಣ ಮುಖಗಳನ್ನು ಅವುಗಳಲ್ಲಿ ತರುವ ಕೌಶಲವನ್ನು ಅವರು ರೂಢಿಸಿಕೊಳ್ಳುವುದಾದರೆ ಖಂಡಿತವಾಗಿಯೂ ಉತ್ತಮ ಕಥೆಗಳನ್ನು ಕೊಡಬಲ್ಲವರಾಗಿದ್ದಾರೆ.

**ಬೋರೆಗೌಡ ಚಿಕ್ಕಮರಳಿ**

# ಕೇರಿಗೆ ಬಂದ ಹೋರಿ: ಕೃಷ್ಣಮೂರ್ತಿ ಹನೂರು

(ಪುರೋಗಾಮಿ, ಬೆಂಗಳೂರು-೩, ೧೯೯೦),

ಜಾನಪದವನ್ನು ಕುರಿತ ನಾಲ್ಕು ಕೃತಿಗಳನ್ನೂ, ಒಂದು ಕಾದಂಬರಿಯನ್ನೂ ಈಗಾಗಲೇ ಹೊರತಂದಿರುವ ಕೃಷ್ಣಮೂರ್ತಿಹನೂರರ ಆರನೆಯ ಕೃತಿ 'ಕೇರಿಗೆ ಬಂದ ಹೋರಿ' ಎಂಬ ಕಥಾ ಸಂಕಲನ. ಜಾನಪದದ ಬಗೆಗೆ ಅವರಿಗಿರುವ ಆಸಕ್ತಿ ಇಲ್ಲಿನ ಕೆಲವು ಕಥೆಗಳಲ್ಲಿ ಸೃಜನಾತ್ಮಕ ರೂಪವನ್ನು ಪಡೆದಿದೆ. ಜಾನಪದ ನಂಬಿಕೆಗಳು, ಆಶಯಗಳು, ಕಥಾಪ್ರಸಂಗಗಳನ್ನು ಅಲ್ಲಲ್ಲಿ ಬಳಸಿಕೊಂಡಿದ್ದಾರೆ. 'ಬಿಸ್ದಶಿಕಾರಿ', 'ಕುಂಡಜ್ಜನ ಪರ್ಸಂಗ' ಎಂಬ ಕಥೆಗಳು ಈ ದೃಷ್ಟಿಯಿಂದ ಗಮನಾರ್ಹ. ಕುಂಡಜ್ಜನಿಂದ ಪರ್ಸಂಗ ಹೇಳಿಸುತ್ತಲೇ ಅವನ ಪರ್ಸಂಗವನ್ನೂ ಕಥೆಗಾರರು ಬಿಚ್ಚಿಡುವ ವಿಧಾನ ಆಕರ್ಷಣೀಯ. 'ಮಾದೇವಿ ಊರು ಬಿಟ್ಟಳು' ಕಥೆಯಲ್ಲಿ ಕೂಡ ಮುಖ್ಯ ಘಟನೆಗಳು ಗ್ರಾಮದೇವತೆಯ ದೇವಾಲಯ ಹಾಗೂ ಹಬ್ಬದ ಹಿನ್ನೆಲೆಯಲ್ಲಿಯೇ ಜರುಗುತ್ತವೆ. ಹೀಗಾಗಿ ಈ ಕಥೆಗಳಿಗೆ ಜಾನಪದ ಪರಿವೇಷವೊಂದನ್ನು ತರಲು ಲೇಖಕರು ಪ್ರಯತ್ನಿಸಿದ್ದಾರೆ. ಎನ್ನಬಹುದು. ಭಾಷೆಯ ಬಳಕೆಯಲ್ಲಿ ಕೂಡ ಜನಪದ ಸತ್ವ ಒಸರುತ್ತದೆ. ದೇವನೂರು ಮಹದೇವರ ಅಭಿವ್ಯಕ್ತಿ ವಿಧಾನವನ್ನು ಹನೂರರ ಬರವಣಿಗೆ ನೆನಪಿಗೆ ತರುವಂತಿದ್ದರೂ, ದೇವನೂರರ 'ಕುಸುಮ ಬಾಲೆ' ಸೃಷ್ಟಿಸುವ ತೊಡಕನ್ನೇನೂ ಅವರು ಸೃಷ್ಟಿಸುವುದಿಲ್ಲ. ಸರಳವೂ ಸರಾಗವೂ ಆದ ರೀತಿಯಲ್ಲಿಯೇ ಅನುಭವದ ಸಂಕೀರ್ಣತೆಯನ್ನು ಭಾಷೆಯಲ್ಲಿ ವ್ಯಂಜಿಸುವ ಕೌಶಲ್ಯವನ್ನು ಹನೂರರು ರೂಢಿಸಿಕೊಂಡಿದ್ದಾರೆ. ಅಭಿವ್ಯಕ್ತಿಯ ಪ್ರಯೋಗಶೀಲತೆಯಿಂದಾಗಿ ಇಲ್ಲಿನ ಕಥೆಗಳನ್ನೋದಿದಾಗ ನಿಜಕ್ಕೂ ಒಂದು ಹೊಸ ಅನುಭವವಾಗುತ್ತದೆ.

ಕರ್ನಾಟಕದ ಆಗ್ನೇಯ ಮೂಲೆಯ ಸಾನು ಪ್ರದೇಶದ ಜನಜೀವನ ಇಲ್ಲಿನ ಕಥೆಗಳಲ್ಲಿ ಮೈದುಂಬಿದೆ. ಸಮೃದ್ಧ ಜನಪದ ಸಾಹಿತ್ಯ ನಿರ್ಮಿತಿಗೆ ಕಾರಣವಾದ ಈ ಭಾಗದ ಬದುಕು ಶಿಷ್ಟ ಸಾಹಿತ್ಯದಲ್ಲಿ ಸೃಜನಾತ್ಮಕ ಅಭಿವ್ಯಕ್ತಿಯನ್ನು ಕಂಡುಕೊಂಡುದು ವಿರಳ. ಕಾಡು ಕಣಿವೆ ಮಲೆಗಳ ನಡುವೆ ಬದುಕುವ ಇಲ್ಲಿನ ಜನರಿಗೆ ತಮ್ಮದೇ ಆದ ನೋವು ನಲಿವುಗಳಿವೆ, ಪರಂಪರೆಯಿದೆ. ಹನೂರರು ಇದನ್ನೆಲ್ಲಾ ಸಮರ್ಥವಾಗಿ ದುಡಿಸಿಕೊಳ್ಳಬಲ್ಲವರಾಗಿದ್ದಾರೆ. ದೀನದಲಿತರ ಕಷ್ಟಕಾರ್ಪಣ್ಯಗಳನ್ನೇ ತಮ್ಮ ಕಥೆವಸ್ತುವನ್ನಾಗಿ ಸ್ವೀಕರಿಸಿರುವ ಇವರು ಶೋಷಣೆ ಮೌಢ್ಯಗಳ ಕುರಿತಾದ ತಮ್ಮ ವಿಚಾರವಂತಿಕೆಯನ್ನೂ ಇಲ್ಲಿ ತಂದಿದ್ದಾರೆ. ಸಮಕಾಲೀನ ಸಾಹಿತ್ಯದ ಎರಡು ಮುಖ್ಯ ಮಾರ್ಗಗಳಾದ ಬಂಡಾಯ ಹಾಗೂ ದಲಿತಗಳಲ್ಲಿ ಯಾವೊಂದರಲ್ಲಿಯೂ ತಮ್ಮನ್ನು ಗುರುತಿಸಿಕೊಳ್ಳಲು ಇವರು ಆಸಕ್ತಿ ತೋರಿದಂತಿಲ್ಲ. ಆದರೂ ಇವುಗಳಿಗೆ ಹೊರತಾದ ಆಯಾಮವೇನೂ ಈ ಕಥೆಗಳಲ್ಲಿಲ್ಲ. ಈ ಪ್ರಭೆ 'ಯಾವ ಪಂಥಕ್ಕೂ

ನಿಲುಕದ್ದು' ಎಂದು ಹೇಳಲು ಬರುವುದಿಲ್ಲ. 'ಕೇರಿಗೆ ಬಂದ ಹೋರಿ'ಯಲ್ಲಿ ಕೆಳಜಾತಿಯ ಹೆಣ್ಣೊಂದರ ಮುಗ್ಧತೆಯನ್ನು ಮೇಲುಜಾತಿಯ ಯುವಕನೊಬ್ಬ ತನ್ನ ದೇಹದ ಹಸಿವಿನ ಪೂರೈಕೆಗಾಗಿ ಬಳಸಿಕೊಂಡದ್ದರ ಚಿತ್ರಣವಿದೆ; ಊರ ಪ್ರಮುಖ ಜಾತಿಗಳ ನ್ಯಾಯಸ್ಥರು ಅಸಹಾಯ ಹೆಣ್ಣೊಂದರ ದೇಹದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಲು ಹವಣಿಸುವ ಕಾಕದೃಷ್ಟಿ 'ಮಹಾದೇವಿ ಊರುಬಿಟ್ಟಳು' ಕಥೆಯಲ್ಲಿ ಮುಖ್ಯವಾಗುತ್ತದೆ: ಅಂಗಹೀನಳೂ, ಅನಕ್ಷರಸ್ಥಳೂ, ಅಜ್ಞಳೂ ಆದ ದ್ಯಾಮವ್ವನ ಚೂರುಪಾರು ಆಸ್ತಿಯನ್ನು ಒಡಹುಟ್ಟಿದವರೇ ಕಬಳಿಸಲು ಹವಣಿಸುವ ರಾಕ್ಷಸ ಪ್ರವೃತ್ತಿ 'ದ್ಯಾಮವ್ವನ ಗೃಹಕಲಹ'ದಲ್ಲಿದೆ; ಶಿಕ್ಷಕನೊಬ್ಬನ ಪ್ರಾಮಾಣಿಕ ಸೇವೆಯನ್ನು ಗುರುತಿಸಿ ಗೌರವಿಸುವುದಕ್ಕೆ ಬದಲಾಗಿ ಅವನ ಬವಣೆ ಹಾಗೂ ಸಾವಿಗೇ ಕಾರಣವಾಗುವ ನಮ್ಮ ಆಡಳಿತಾಂಗದ ದೌರ್ಬಲ್ಯ 'ವರ್ಗಾವಣೆ'ಯ ವಸ್ತುವಾಗಿದೆ ಇಲ್ಲೆಲ್ಲ ಶೋಷಣೆ ದಬ್ಬಾಳಿಕೆಗಳ ವಿರುದ್ಧವಾದ ಧ್ವನಿ ಹಾಗೂ ದುರ್ಬಲರೂ ದೀನರೂ ಆದವರ ವಿಷಯದಲ್ಲಿ ಅಂತರಂಗದ ಕಳಕಳಿ ('ಅನುಕಂಪ'ಕ್ಕೆ ಮೀರಿದ) ಕಥೆಗಾರರಿಗಿರುವುದನ್ನು ಅರಿಯಬಹುದಾಗಿದೆ. ಅವರ ಈ ಸಾಮಾಜಿಕ ಕಳಕಳಿ ಹಸಿಯಾದ ರೋಷ ಹಾಗೂ ಭಾವೋದ್ವೇಗದ ಮಟ್ಟವನ್ನು ಮೀರಿ ಕಲಾತ್ಮಕತೆಯ ಪರಿಪಾಕವನ್ನು ಕಂಡುಕೊಂಡಿರುವುದು ಮುಖ್ಯ.

ಇಲ್ಲಿನ ಒಂದು ಕೊರತೆಯೆಂದರೆ ಸಾಮಾಜಿಕ ಆವರಣದ ಅಸ್ಪಷ್ಟತೆ. ಭಾರತೀಯ ನೆಲದ ಸಾಮಾಜಿಕ ಪರಿಸ್ಥಿತಿಯಲ್ಲಿ ಬರವಣಿಗೆಗೆ ತೊಡಗುವ ಯಾವನೇ ಒಬ್ಬ ಸೃಜನಶೀಲ ಲೇಖಕ ಈ ಆವರಣವನ್ನು ಆದಷ್ಟೂ ಸ್ಪಷ್ಟವಾಗಿ ತರುವುದು ಅನಿವಾರ್ಯ; ಅದರಲ್ಲೂ ಸಾಮಾಜಿಕ ಕಳಕಳಿಯ ಲೇಖಕನಾದಲ್ಲಿ ಇದರ ಅವಶ್ಯಕತೆ ಇನ್ನೂ ಹೆಚ್ಚು. ಹಾಗೆ ತರದೇ ಹೋದಲ್ಲಿ ಲೇಖಕ ತನ್ನ ಪಾತ್ರಗಳ ಮೂಲಕ ಅಭಿವ್ಯಕ್ತಿಸುವ ನೋವಿನ ತೀವ್ರತೆ ಹಾಗೂ ಪ್ರತಿಸ್ಪಂದನಗಳು ತಕ್ಕ ಪ್ರಮಾಣದಲ್ಲಿ ಓದುಗರನ್ನು ತಲುಪುವಲ್ಲಿ ವಿಫಲವಾಗುತ್ತವೆ. ಹಾಗಾಗಿ ಲೇಖಕ ತನ್ನ ಉದ್ದೇಶದ ಈಡೇರಿಕೆಯಾಗದೆ ಸೋಲುತ್ತಾನೆ. 'ಮಹಾದೇವಿ ಊರು ಬಿಟ್ಟಳು' ಕಥೆಯಲ್ಲಿ ನ್ಯಾಯಸ್ಥರು ಆಡುವ ಮಾತುಗಳ ಮೂಲಕ ಮೇಲುಜಾತಿಯವಳಾದ ಮಹಾದೇವಿ ಕೆಳಜಾತಿಯವನ್ನು ಕೂಡಿ ಜಾತಿಗೆ ಅಪಮಾನ ಮಾಡಿದಳೆಂಬುದು ತಿಳಿಯುತ್ತದೆಯೇ ವಿನಹ ಅವರ ಜಾತಿಗಳಾವುವೆಂಬುದು ತಿಳಿಯುವುದಿಲ್ಲ. 'ಕೇರಿಗೆ ಬಂದ ಹೋರಿ'ಯಲ್ಲಿ ಮೇಲುಜಾತಿಯ ಗೆಣೆಕಾರನನ್ನು ಸಂಪಾದಿಸಿದ ಕೆಂಪಮ್ಮ ತನ್ನ ಸಂಬಂಧ ಬಹಿರಂಗವಾಗಲು ತವಕಿಸಿದರೆ, ಸಣ್ಣರಾಯಿ ಅದಕ್ಕೆ ಇಷ್ಟಪಡುತ್ತಿರಲಿಲ್ಲವೆಂಬ ನಿರೂಪಣೆಯಿದ್ದರೂ ಅವರ ಜಾತಿಗಳು ಬಹಿರಂಗವಾಗುವುದಿಲ್ಲ. ಈ ಅಸ್ಪಷ್ಟತೆ ಒಡೆದು ಕಾಣುವ ಕಥೆಯೆಂದರೆ 'ಮುಖ'. ಈ ಕಥೆಯ ಮುಖ್ಯಪಾತ್ರ ಪುಟ್ಟಣ್ಣನ ತಂದೆ ಪೂಜಾರಿಯಾಗಿದ್ದನೆಂಬುದರ

ಮೂಲಕ ಇಲ್ಲಿರುವುದು ಬ್ರಾಹ್ಮಣ ಕುಟುಂಬವೊಂದರ ಕಥೆ ಇರಬೇಕು ಎನಿಸಿದರೂ, ಆ ಕುಟುಂಬದ ಚೌಕಟ್ಟಿನಲ್ಲಿ ಬರುವ ಪಾತ್ರಗಳ ಮಾತುಗಾರಿಕೆ, ಬದುಕಿನ ರೀತಿ ನೀತಿಗಳನ್ನು ಗಮನಿಸುತ್ತಾ ಹೋದಂತೆ ಶೂದ್ರವರ್ಗಕ್ಕೆ ಸೇರಿದ ಯಾವುದೋ ಕುಟುಂಬದ ಕಥೆ ಇದಾಗಿರಬೇಕು ಎನಿಸುತ್ತದೆ, ಸ್ಪಷ್ಟ ತಿಳಿವು ಮೂಡುವುದಿಲ್ಲ. ಬ್ರಾಹ್ಮಣೇತರರಲ್ಲಿ ಪೂಜಾರಿಗಳಿಲ್ಲವೆ ಎಂಬ ಪ್ರಶ್ನೆ ಇಲ್ಲಿ ಮುಖ್ಯವಲ್ಲ, ಸಾಮಾಜಿಕ, ಆವರಣದ ಸ್ಪಷ್ಟತೆಯ ಪ್ರಶ್ನೆ ಮುಖ್ಯ. 'ಬಿದ್ದ ಶಿಕಾರಿ' ಎಂಬೊಂದು ಕಥೆಯನ್ನು ಬಿಟ್ಟರೆ ಉಳಿದೆಲ್ಲಾ ಕಥೆಗಳಲ್ಲಿ ಈ ಪ್ರಶ್ನೆ ಉಳಿಯುತ್ತದೆ. ಇದನ್ನೆಲ್ಲಾ ನೋಡಿದಾಗ ಕೃಷ್ಣಮೂರ್ತಿ ಅವರು ತಮ್ಮ ಕಥೆಗಳಿಗೆ ಆಯ್ದುಕೊಳ್ಳುವ ವಸ್ತು. ಆ ವಸ್ತುವಿನ ನಿರ್ವಹಣೆಗೆ ಪೂರಕವಾಗುವ ಪಾತ್ರ, ಆ ಪಾತ್ರಗಳ ಮೂಲಕ ಕಟ್ಟಿಕೊಡುವ ಬದುಕು–ಇವಕ್ಕೆ ಸಂಬಂಧಿಸಿದ ಜಾತಿ ಮತಗಳ ಹೆಸರು ಹೇಳುವಲ್ಲಿ ಒಂದು ರೀತಿಯ ಹಿಂಜರಿಕೆಯನ್ನು ತೋರಿಸಿರುವಂತಿದೆ. ಈ ಹಿಂಜರಿಕೆಯನ್ನೇ ಗುಣವೆಂದು ಭಾವಿಸಿ ಮಾವಿನಕೆರೆ ಅವರು ಕೃಷ್ಣಮೂರ್ತಿ ಅವರ ಬರವಣಿಗೆಯನ್ನು 'ಯಾವ ಪಂಥಕ್ಕೂ ನಿಲುಕದೆ ಬೆಳೆದ ಬರವಣಿಗೆ' ಎಂದಿರುವಂತೆ ತೋರುತ್ತದೆ. ಆದರೆ ಈ ಬಗೆಯ ಹಿಂಜರಿಕೆ ಮೆಚ್ಚುಗೆಗಿಂತ ಹೆಚ್ಚಾಗಿ ಆತಂತಕ್ಕೇ ಎಡೆಮಾಡಿಕೊಡುತ್ತದೆ.

**ಬೋರೇಗೌಡ ಚಿಕ್ಕಮರಳಿ**

## ಜಾನಪದ ಸ್ಪಂದನ : ಸಿ. ಕೆ. ನಾವಲಗಿ

**(ಭರತ ಪ್ರಕಾಶನ ಗೋಕಾಕ-೧೯೮೯)**

'ಜಾನಪದ ಸ್ಪಂದನ' ನಾವಲಗಿ ಅವರ ೧೯೮೯ ರಿಂದ ೧೯೮೦ ರ ವರೆಗಿನ, ಅಂದರೆ ಹತ್ತು ವರ್ಷದ (ಮಹಾ ಪ್ರಬಂಧದ) ಅಧ್ಯಯನದ ಫಲ. ಇಲ್ಲಿ ಎಂಟು ಲೇಖನಗಳಿವೆ. 'ಗಾಳಿ: ಜನಪದಿಯ ಅಧ್ಯಯನ' ಲೇಖನವು ಜನಪದರ ಹಾಗೂ ಪೌರಾಣಿಕರ ಭಾವನೆಗಳನ್ನು ತಿಳಿಪಡಿಸುತ್ತಲಿದೆ, 'ಗಾಳಿ'ಗೆ ಹದಿನೇಳು ಹೆಸರುಗಳಿರುವುದನ್ನು ಧನಂಜಯ ಶಬ್ದಕೋಶದ ದಾಖಲೆಗಳನ್ನು ಹೇಳಲಾಗಿದೆ. ಜಾನಪದ ಸಾಹಿತ್ಯದಲ್ಲಿ ಗಾಳಿಯನ್ನು ವರ್ಗೀಕರಿಸಿ, ಮೂಡಗಾಳಿ, ಪಡುಗಾಳಿ, ಆಷಾಢಗಾಳಿ, ಹರಿಶ್ಚಂದ್ರಗಾಳಿ, ಕುಂಬಾರಗಾಳಿ, ಹನುಮಗಾಳಿ, ಸುಂಟರಗಾಳಿ, ದೆವ್ವಗಾಳಿ, ಬಿರುಗಾಳಿ, ಚಂಡಮಾರುತ ಮುಂತಾದ ಬಗೆಗಳು ವಿವರಗೊಂಡಿವೆ. ಒಟ್ಟಾರೆ 'ಗಾಳಿ' ಜನಪದರ ದೈವವಾಗಿ ಸಾಗಿ ಬಂದಿರುವ ರೀತಿ ಜನಪದರ ಬದುಕನ್ನು ಒಳಗೊಂಡಿದೆ. 'ಕೊಣ್ಣೂರಿನ ಜೈನ ಐತಿಹ್ಯ' ಜಾನಪದದಲ್ಲಿಯ ಸಂಸ್ಕೃತಿ–ಸಂಪ್ರದಾಯಗಳ ಬೇರುಗಳನ್ನು ತಿಳಿಸುವಂತಹ ಅಧ್ಯಯನವಾಗಿದೆ.

'ಚೆನ್ನವೀರ ಕಣವಿಯವರ ಕಾವ್ಯದಲ್ಲಿ ಜನಪದತತ್ವ' ಲೇಖನದಲ್ಲಿ ಕಣವಿಯವರು ಕನ್ನಡ ನೆಲದ ನುಡಿಯು ತಮಗೆ ಹೇಗೆ ಪ್ರೇರಣೆ ನೀಡಿದೆ ಎಂಬುದನ್ನು ಕಾವ್ಯ

ಮುಖಾಂತರ ನೀಡಿದ ದಾಖಲೆಗಳನ್ನು ನಾವಲಗಿಯವರು ಭಾವಗೀತೆಗಳಿಂದ 'ನವ್ಯ' ನವೋದಯ ಗೀತೆಗಳಿಂದ ಹೊಸಗನ್ನಡದಲ್ಲಿ ಅವರ ಕೃತಿಗಳಾದ ಮಧುಚಂದ್ರ, ದೀಪಧಾರಿ, ಎರಡುದಡ, ಜೀವಧ್ವನಿ, ಭಾವಜೀವಿ ಮುಂತಾದವುಗಳನ್ನು ಸುದರ ಪಡಿ ಅವರ ನುಡಿಗಳನ್ನು ಸಾಕ್ಷಿಯಾಗಿ ನೀಡಿದ್ದಾರೆ.

'ಜಾನಪದ ದೇವತೆಗಳು ಮತ್ತು ಬಸವಣ್ಣನವರು' ಲೇಖನದಲ್ಲಿ ಜಾನಪದರು ಎಂಬುದಕ್ಕೆ ಪಾಮರರು ಎಂಬ ಅರ್ಥವನ್ನು ನೀಡಿದ್ದಾರೆ. ಆದರೆ ಜಾನಪದರು ಎಂಬುದಕ್ಕೆ ಒಟ್ಟಾರೆ ಅರ್ಥ 'ಸಮೂಹ' ಎಂಬುದು ಸ್ಪಷ್ಟವಿದೆ. ಈ ಸಮೂಹ ಸೃಷ್ಟಿಯಲ್ಲಿ ಕೆಲವು ಅಪನಂಬಿಕೆಗಳೂ ಸೇರಿವೆ 'ಒಂದು ಜನಪದ ತ್ರಿಪದಿ' ಮತ್ತು 'ಎರಡು ಜನಪದ ತ್ರಿಪದಿಗಳು' ಲೇಖನಗಳಲ್ಲಿ ಬದುಕಿನ ಹಾಡುಗಳು ಗರತಿಯರ ಹಾಡುಗಳಾಗಿ ಉಳಿಯದೆ ಬದುಕಿನ ಸಂಸ್ಕೃತಿಯನ್ನು ವಿವರಿಸುವ ತಿಳಿಗನ್ನಡದ ಜನಪದ ತ್ರಿಪದಿಗಳಾಗಿವೆ ಎಂಬ ವಿವರ ಸ್ಪಷ್ಟವಾಗಿದೆ. 'ಹಳ್ಳಿಗಾಡಿನ ಕುಲಕಸಬುಗಳು' ಮಹತ್ವದ ವಿವರಗಳೊಂದಿಗೆ ಮೂಡಿಬಂದ ಗಮನಾರ್ಹ ಲೇಖನ. ಇದರಲ್ಲಿ ಲೇಖಕರು ವೃತ್ತಿ ಜೀವನದ ಏಳ್ಗೆಗೆ ಸೂಚ್ಯವಾಗಿ ನಿರ್ದೇಶನವನ್ನು ನೀಡಿದ್ದಾರೆ. 'ಜನಪದ ಪ್ರೇಮಗೀತೆಗಳು' ಈ ಕೃತಿಯ ಕೊನೆಯ ಲೇಖನ. ಒಟ್ಟಾರೆ ಜಾನಪದ ಸ್ಪಂದನ ಕೃತಿಯು ಜಾನಪದ ಅಧ್ಯಯನವನ್ನು ತಿಳಿಗೊಳಿಸುವ ಜಾನಪದ ವೈಭವವನ್ನೂ ತಿಳಿಯಾಗಿ ಹೇಳುವುದರಲ್ಲಿ ಗಮನಾರ್ಹ ಕೃತಿಯಾಗಿದೆ.

**ನಿಂಗಣ್ಣ ಸಣ್ಣಕ್ಕಿ**

---



---

# ೧೯೯೨ ರ ಪ್ರಕಟನೆಗಳು

## ಕಾವ್ಯ

ಆಟು ಈಟು ಪದ್ಯಗಳು ; ಪ್ರಕಾಶ ಬೆಳಕೂಡ; ಮೂಡಲ ಪ್ರಕಾಶನ, ಮೂಡಲಗಿ; ರೂ. ೧೫.

ಬೇಲಿಯಾಚೆಯ ಹೂವುಗಳು ; ಪರಶುರಾಮ ಕಲಾಲ ; ಸಮತಾ ಪ್ರಕಾಶನ, ಹರಪನ ಹಳ್ಳಿ; ರೂ. ೧೫.

ಜೀವನ ಕೃಷಿ ; ಡಾ. ಎಂ. ಬಿ. ಜಾಧವ; ಅನಿತಾ ಪ್ರಕಾಶನ, ಹುಬ್ಬಳ್ಳಿ; ರೂ. ೧೨.

ಶಹರಿನ ಮುಖಗಳು ; ಕೋಡು ಭೋಜಶೆಟ್ಟಿ; ಸಾಹಿತ್ಯ ಲಹರಿ ಪ್ರಕಾಶನ, ಔರಂಗಾಬಾದ, ರೂ. ೧೦.

ಕಬೀರ ದಾಸರ ಕನ್ನಡ ದೋಹೆಗಳು ; ಇಟಗಿ ಈರಣ್ಣ ; ಸಾಹಿತ್ಯ ಭಂಡಾರ, ಹುಬ್ಬಳ್ಳಿ ; ರೂ. ೧೫

ಹಡದವ್ವ ನಿನ್ನ ಮರೆಯಲ್ಹ್ಯಾಂಗ; ಲಲಿತಾ ಗವಳೆ; ಶ್ರೀ ವಿಜಯ ಪ್ರಕಾಶನ, ಧಾರವಾಡ; ರೂ. ೧೨.

ಕೆಂಪು ರೆಕ್ಕೆಯ ಹಕ್ಕಿ; ಆಂಜನೇಯ ಜಾಲಿಬೆಂಚಿ; ಜಾಲಿಬೆಂಚಿ ಪ್ರಕಾಶನ, ರಾಯಚೂರು; ರೂ. ೧೨.

ಚಂದ್ರಚೇತನ ; ಸಂ–ಚಂದ್ರಶೇಖರ ಬೆನ್ನೂರ; ಸಂಘರ್ಷ ಪ್ರಕಾಶನ, ಹೂವಿನ ಹಡಗಲಿ; ರೂ. ೧೮.

ಜೀವಂತ ಶವಗಳು ನಕ್ಕಾಗ ; ಸಂ– ದೊಡ್ಡ ಬಸಪ್ಪ, ಬಳೂರಗಿ ಉದಯೋನ್ಮುಖ ಕಲಾವಿದರ ಬಳಗ, ಭೀಮರಾಯನಗುಡಿ; ರೂ. ೨೦.

ಶಬ್ದಾತೀತ ; ಸುಮಿತ್ರಾ ಹಲವಾಯಿ; ಪ್ರೀತಿ ಪ್ರಕಾಶನ, ಧಾರವಾಡ; ರೂ. ೧೦.

ಅರ್ಘ ; ಸುಮಿತ್ರಾ ಹಲವಾಯಿ; ಪ್ರೀತಿ ಪ್ರಕಾಶನ, ಧಾರವಾಡ; ರೂ. ೧೦.

ದೇಶ ಕೋಶ ದಾಸವಾಳ ; ಎಲ್ ಎನ್. ಮುಕುಂದರಾಜ; ಸೂರ್ಯ ಪ್ರಕಾಶನ, ನಾಗರವಳ್ಳಿ; ರೂ. ೩೬.

ಭೂಮಧ್ಯ ರೇಖೆ ; ಚಿಂತಾಮಣಿ ಕೊಡ್ಲೆಕೆರೆ; ಚಿತ್ರಮಾಲ ಪ್ರಕಾಶನ, ಅಘನಾಶಿನಿ; ರೂ. ೧೮.

ಅಮೃತಮತಿ ಸ್ವಗತ; ಎಚ್. ಎಲ್. ಪುಷ್ಪ; ಅನ್ವೇಷಣೆ ಪ್ರಕಾಶನ, ಬೆಂಗಳೂರು; ರೂ, ೧೮.

## ನಾಟಕ

ಸೆಳೆತ ; ಚಂದ್ರಕಾಂತ ಕುಸನೂರ; ವಠಾಲಗತ್ತಿ ಪ್ರಿಂಟಿಂಗ್ ಆ್ಯಂಡ್ ಪಬ್ಲಿಶಿಂಗ್ ಹೌಸ್, ಬೆಳಗಾವಿ; ರೂ. ೩೦.

ನರಬಲಿ ; ಡಾ. ಬಸವರಾಜ ಸಬರದ; ಸಂಕ್ರಮಣ ಪ್ರಕಾಶ, ಧಾರವಾಡ;
ರೂ. ೧೨.

ನಗೆ ಚೆಲ್ಲಿದ ಹುಡುಗಿ ; ಕಾವ್ಯಜೀವಿ; ಸಹನಾ ಪ್ರಕಾಶನ, ಇಳಕಲ್ಲ; ರೂ. ೧೦.

## ಸಣ್ಣ ಕತೆ-ಕಾದಂಬರಿ

ಹೊಸಳ್ಳಿ ವೃತ್ತಾಂತ ; ಬಿ. ಚಂದ್ರೇಗೌಡ; ಕೃತಿ ಪ್ರಕಾಶನ, ಶಿವಮೊಗ್ಗ; ರೂ. ೨೨.

ಮಣ್ಣಿನ ಗುಣ ; ಕೋರಗಲ್ ವಿರೂಪಾಕ್ಷಪ್ಪ; ಪ್ರಗತಿಪರ ವೇದಿಕೆ, ಹಾವೇರಿ;
ರೂ. ೨೫.

ಮಾಜಲು : ಕೆ. ಆರ್. ವಿದ್ಯಾಧರ; ಪರಸ್ಪರ ಚಿಂತನ ವೇದಿಕೆ, ಸುಳ್ಯ; ರೂ. ೩೦.

ಒಂದು ಕೂದಲಿನ ಕತೆ : ಕೋಡು ಭೋಜಶೆಟ್ಟಿ; ಸಾಹಿತ್ಯಲಹರಿ ಪ್ರಕಾಶನ,
ಔರಂಗಾಬಾದ; ರೂ. ೧೦.

## ಇತರ

ಉ. ಕ. ಜಿಲ್ಲೆಯ ಸಿದ್ದಿ ಜನಾಂಗ : ಎನ್ ಆರ್. ನಾಯಕ; ಜಾನಪದ ಪ್ರಕಾಶನ,
ಹೊನ್ನಾವರ; ರೂ. ೮.

ಸ್ವಾತಂತ್ರ್ಯ ಉಳಿಸಿ ಆಂದೋಲನ ; ಸೇವಾಗ್ರಾಮ ಘೋಷಣಾ ಪತ್ರ; ರೂ. ೧೦.

ಜಾನಪದ ಸಂಬಾರ ಬಟ್ಟಲು ; ಎನ್. ಆರ್ ನಾಯಕ; ಜಾನಪದ ಪ್ರಕಾಶನ,
ಹೊನ್ನಾವರ; ರೂ. ೩೨

## ನವಕರ್ನಾಟಕ ಪ್ರಕಾಶನ, ಬೆಂಗಳೂರು

ಇಂದ್ರಜಾಲ ; ಉದಯ ಜಾದೂಗಾರ್; ರೂ. ೨೦.

ನೈಸರ್ಗಿಕ ವಿಕೋಪಗಳು ; ಅನಂತರಾಮು; ರೂ. ೧೮.

ಹಾರಾಟದ ಕಥೆ ; ಶಂಕರಪ್ಪ; ರೂ. ೨೫.

ಸುಖದಾಂಪತ್ಯ ; ಸಿ. ಆರ್. ಚಂದ್ರಶೇಖರ ; ರೂ. ೧೦.

ನಗರಗಳು ; ಸಿ. ಆರ್. ಕೃಷ್ಣರಾವ್; ರೂ. ೨೦.

ವೈದ್ಯ ವಿಜ್ಞಾನಿಗಳು : ಚಂದ್ರಪ್ಪ ಗೌಡ; ರೂ. ೨೨.

ಕಯ್ಯೂರಿನ ರೈತ ವೀರರು; ಫಕೀರ ಮು. ಕಟ್ಪಾಡಿ; ರೂ. ೨೨.

## ೧೯೯೩ ರ ಪ್ರಕಟನೆಗಳು

### ಕಾವ್ಯ

ಹೋಮಾ ಎಂಬ ಪಕ್ಷಿ : ಎಚ್. ಎಸ್. ಭೀಮನಗೌಡರ ; ನಾಲಗತ್ತಿ ಆಫ್‌ಸೆಟ್

ಪ್ರಿಂಟರ್ಸ್; ಮತ್ತು ಪಬ್ಲಿಶರ್ಸ್, ಬೆಳಗಾವಿ; ರೂ. ೨೦.

ಪರಿಸರ-ಮಾನವ ; ಕೆ. ಬಿ. ಬ್ಯಾಳಿ; ತಾಯಿ ಪ್ರಕಾಶನ, ಕುಕನೂರ; ರೂ. ೧೫.

ಇದಿಷ್ಟೇ ಸತ್ಯ ; ರಾಮು ಜಾಧವ; ಸಂಕ್ರಮಣ ಪ್ರಕಾಶನ; ಧಾರವಾಡ; ರೂ. ೧೦.

ಧ್ವನಿಗೂಡು ; ಎಂ. ಎಂ. ಪುರದನಗೌಡರ; ಪ್ರತಿಭಾ ಪ್ರಕಾಶನ, ಕಲಘಟಗಿ; ರೂ. ೬.

ಅವಳಿದೆಯ ಜಂಗಮ ; ಎಸ್. ಜಿ. ಸಿದ್ದರಾಮಯ್ಯ; ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು; ರೂ. ೨೫.

ಬಾ ಚೇತನವೆ ಬಾ ; ಹೊರೆಯಾಲ ದೊರೆಸ್ವಾಮಿ; ಏಕಲವ್ಯ ಪ್ರಕಾಶನ, ಮೈಸೂರು; ರೂ: ೧೨.

ಆಂಗಿರಸ ; ಸಂ-ಡಾ. ಪುಟ್ಟಶಂಕರಪ್ಪ; ಭಾರತೀಯ ಕರ್ನಾಟಕ ಸಂಘ, ಬೆಂಗಳೂರು; ರೂ. ೨೪.

ಏಕಾಂತದ ಮನುಷ್ಯ ; ಸರಜೂ ಕಾಟ್ಕರ್; ವೈಶಾಖ ಪ್ರಕಾಶನ, ಬೆಂಗಳೂರು; ರೂ. ೧೫.

ಬಿಂದು : ಉಜ್ವಲಾ ಜ. ಪುಣಜಗೌಡ; ಗೊಮ್ಮಟ ಪ್ರಕಾಶನ, ಬೆಳಗಾವಿ; ರೂ. ೧೫;

ಮೊಗ್ಗು ; ಡಾ. ಸುನೀತಿ ಉದ್ಯಾವರ : ಕನ್ನಡ ಸಾಹಿತ್ಯ ಸಂಗಮ, ಮುಂಬಯಿ; ರೂ. ೨೦.

ಸ್ಪಂದನ ; ಡಾ. ವಾಮನ ಬೇಂದ್ರೆ; ಶ್ರೀಮಾತಾ ಪ್ರಕಾಶನ, ಧಾರವಾಡ; ರೂ. ೧೫.

ವಿಧಾನಸೌಧ ; ಆರ್. ಮೋಹನ ನಾಗಮ್ಮನವರ; ಮಹಾಮನೆ ಪ್ರಕಾಶನ, ಧಾರವಾಡ; ರೂ. ೧೮.

## ಸಣ್ಣಕತೆ–ಕಾದಂಬರಿ

ಅದಮ್ಯ ; ಜ. ಹೊ. ನಾರಾಯಣ ಸ್ವಾಮಿ; ಮಾನವ ಪ್ರಕಾಶನ, ಹಾಸನ; ರೂ. ೧೮.

ತಮಟೆ ; ಸೋಮಣ್ಣ ಹೊಂಗಳ್ಳಿ; ವೈಚಾರಿಕ ಪುಸ್ತಕ ಮಾಲೆ, ಅನುವನ ಹಳ್ಳಿ; ರೂ. ೨೦.

## ವಿಮರ್ಶೆ

ಕಡೆಗೋಲು ; ರವಿ ರಾ. ಅಂಚನ್: ಗುರುಭಾರತಿ ಅಧ್ಯಯನ ಕೇಂದ್ರ, ಬಕ್ಕಿಹಾಳು; ರೂ. ೨೦.

ಕೆರೆಗೆ ಹಾರವನ್ನು ಕುರಿತು ; ಎಸ್. ಜಿ, ಸಿದ್ದರಾಮಯ್ಯ; ವೈಚಾರಿಕ ಪುಸ್ತಕ ಮಾಲೆ, ಅನುವನ ಹಳ್ಳಿ; ರೂ. ೬.

ಶ್ರೀ ಕುವೆಂಪು ಮತ್ತು ಶ್ರೀ ರಾಮಾಯಣ ದರ್ಶನ ; ಡಾ. ಗುರುಪಾದ ಮರಿಗುದ್ದಿ; ಶ್ರೀ ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಶಿ: ರೂ. ೨೦.

ಕೆರೂರ ವಾಸುದೇವಾಚಾರ್ಯರು ; ಡಾ. ಪ್ರಹ್ಲಾದ ಮುದಗಲ್; ಕನ್ನಡ ವಿಭಾಗ ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ: ರೂ, ೬೦.

## ಇತರ

ನಾಸ್ತಿಕನು ಮತ್ತು ದೇವರು ; ಗೌರೀಶ ಕಾಯ್ಕಿಣಿ; ಕಾಲಗತಿ ಪ್ರಕಾಶನ ರಾಯಬಾಗ; ರೂ. ೩೦.

ರಾಷ್ಟ್ರೀಯ ಏಕತೆ; ಸಂ– ಸಿ. ಆರ್. ಭಟ್; ರಾಷ್ಟ್ರೀಯ ಏಕತಾ ಆಂದೋಲನ ಸಮಿತಿ, ಧಾರವಾಡ; ರೂ. ೫.

ರಾಷ್ಟ್ರೀಯತೆ ಮತ್ತು ಮುಸ್ಲಿಮರು ; ಫಕೀರ್ ಮುಹಮದ್ ಕಟ್ಪಾಡಿ; ಕೊಟ್ಟಾರ ಪ್ರಕಾಶನ, ಮಂಗಳೂರು; ರೂ. ೧೫.

## ನವಕರ್ನಾಟಕ ಪ್ರಕಾಶನ, ಬೆಂಗಳೂರು

ರಸ ನಿಮಿಷಗಳು ; ಜೆ, ಆರ್. ಲಕ್ಷ್ಮಣರಾವ್; ರೂ. ೨೮.

ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ ; ವಿ. ಕಾ. ರಾಜವಾಡೆ; ರೂ. ೨೮.

ಸ್ವಾತಂತ್ರ್ಯ ಹೋರಾಟದಲ್ಲಿ ಭಾರತೀಯ ಮುಸ್ಲಿಮರ ಪಾತ್ರ; ಶಾಂತಿಮೈರಾಯ್; ರೂ. ೧೦.

ಏನು ಏಕೆ ಹೇಗೆ ; ಡಾ. ಆನಂದ ದೇಶಪಾಂಡೆ; ರೂ. ೧೮.

ಡಂಕೆಲ್ ಪ್ರಸ್ತಾವ ; ಡಾ. ಅಂಗಡಿ, ಸುನಂದ ಶರಣ; ರೂ. ೭.

ಕಣ್ಣಿನ ಸಂರಕ್ಷಣೆ ; ಡಾ. ಎಚ್. ಎಸ್. ಮೋಹನ; ರೂ. ೧೮.

ಹಾನೂಶ್ (ನಾಟಕ) ; ಭೀಷ್ಮ ಸಾಹನಿ; ರೂ. ೨೫.

ನೀಲಿಕಂದರ ; ಡಾ. ವಿರುಪಾಕ್ಷ ಕೆ. ಬಣಕಾರ; ರೂ. ೨೫.

ಸೃಜನ ಶೀಲತೆ ; ಮಹಾಬಲೇಶ್ವರ ರಾವ್; ರೂ. ೨೫.

ಪೂರ್ವಗ್ರಹ ಮತ್ತು ದಂತಕಥೆ ; ಎ. ಬಿ. ಬರ್ಧನ್; ರೂ. ೪.

ಸಂಘ ಪರಿವಾರದ ಹಿಂದುತ್ವ ನಿಜವಾದ ಹಿಂದುತ್ವವೆ ; ಬರ್ಧನ್; ರೂ. ೧.

ಜಾತಿ, ರಾಜಕೀಯ ಪಕ್ಷಗಳು ಮತ್ತು ಕೋಮುವಾದ ; ಡಾ. ಆರ್ಕೆ; ರೂ. ೧.

ಹಿಂದೂ ಮತೀಯವಾದದ ಮುಖಗಳು, ಮುಖವಾಡಗಳು; ಡಾ. ಗುರುದತ್; ರೂ. ೨.

ಭಾರತದಲ್ಲಿ ಕೋಮುವಾದ ; ಕೆ. ಎನ್. ಪಣಿಕ್ಕರ್; ರೂ. ೧.

ಬಾಬ್ರಿ ಮಸೀದಿ-ರಾಮ ಜನ್ಮ ಭೂಮಿ ವಿವಾದ ; ರಾಜೇಶ್ವರರಾವ್; ರೂ. ೩.

## ಈ ಸಂಚಿಕೆಯ ಲೇಖಕರು

**ಧರಣೇಂದ್ರ ಕುರಕುರಿ** ಹಿಂದಿ ಪ್ರಾಧ್ಯಾಪಕ, ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು, ಶಿರಸಿ ೫೮೧ ೪೦೧ **ಡಾ. ತೇಜಸ್ವಿ ಕಟ್ಟೀಮನಿ** ಹಿಂದಿ ಪ್ರಾಧ್ಯಾಪಕ, ಕರ್ನಾಟಕ ಕಾಲೇಜು, ಧಾರವಾಡ ೧ **ಕ. ಮ. ರವಿಶಂಕರ** ಕನ್ನಡಪ್ರಭ ವರದಿಗಾರ, ಚನ್ನಬಸಪ್ಪ ಗಾರ್ಡನ್ಸ್, ಚಿತ್ರದುರ್ಗ ೫೭೭ ೫೦೧ **ಕೆ. ಫಣಿರಾಜ** ಪಾಯ್ಸ್ ಕಂಪೌಂಡ, ಕೊಟ್ಟಾರ ಕ್ರಾಸ್ ರೋಡ, ಮಂಗಳೂರು ೫೭೫ ೦೦೪ **ಟಿ. ಆರ್. ಚಂದ್ರಶೇಖರ** ಮ. ನಂ. ೨, ಅಮರಾವತಿ, ಹೊಸಪೇಟೆ ೫೮೩ ೨೦೧ **ಮೃತ್ಯುಂಜಯ ರುಮಾಲೆ** ವಿಜಯನಗರ ಕಾಲೇಜು ಹೊಸಪೇಟೆ ೫೮೩ ೨೦೧ **ಡಾ. ಬಸವರಾಜ ಸಬರದ** ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿ. ವಿ, ಗುಲಬರ್ಗಾ ೫೮೫ ೧೦೬ **ಬಿ. ಎಸ್. ಪುಂಡರಡ್ಡಿ** ಇಂಗ್ಲಿಷ್ ಉಪನ್ಯಾಸಕ, ಸ. ಪ. ಪೂ. ಕಾಲೇಜು, ಸಜ್ಜಲಗುಡ್ಡ (ರಾಯಚೂರು) **ಎಂ. ಡಿ. ವಕ್ಕುಂದ** ಕನ್ನಡ ಉಪನ್ಯಾಸಕ, ಸ. ಪ್ರ. ದ. ಕಾಲೇಜು ರೋಣ ೫೮೨ ೨೦೯ **ಶೈಲಜಾ ಪುದುಕೋಳಿ** ಕೇರಾಫ್ ನಾಗೇಂದ್ರ ಅ್ಯಂಡ್ ಕಂಪನಿ, ೧ ನೇ ಮಹಡಿ, ಮಿನರಲ್ ಹೌಸ್, ಹಂಪನಕಟ್ಟೆ, ಮಂಗಳೂರು ೫೭೫ ೦೦೧ **ಎಂ. ಲೋಕೇಶ** ಏಕಲವ್ಯ, ೧೦೪೦, ಪಂಪ ಮಂತ್ರ ರಸ್ತೆ, ಕುವೆಂಪು ನಗರ. ಮೈಸೂರು ೫೭೦ ೦೨೩ **ಡಾ. ಬಸವರಾಜ ಸಾದರ**, ಕಾರ್ಯಕ್ರಮ ನಿರ್ವಾಹಕ, ಆಕಾಶವಾಣಿ, ಬೆಂಗಳೂರು ೫೬೦ ೦೦೧ **ಶಿವಾನಂದ ಚಿತ್ರಗಾರ** ಸ. ಪ. ಪೂ. ಕಾಲೇಜು, ಹೊಸನಗರ ೫೭೭ ೪೧೮ **ಅಶೋಕ ಮಠದ** ಕೆನರಾ ಬ್ಯಾಂಕ ವೃತ್ತ ಕಾರ್ಯಾಲಯ, ರಾಜಭಾಷಾ ಅನುಭಾಗ, ಮಂಗಳೂರು ೫೭೫ ೦೦೧ **ಹಮೀದ್ ಮಂಜೇಶ್ವರ** ಮಜಿ ಬೈಲ್ ಅಂಚೆ, ಮಂಜೇಶ್ವರ ೬೭೧ ೩೨೩ **ಎಸ್. ಸಿ. ಸದಾಶಿವ** ಆಂಗ್ಲಭಾಷಾ ಉಪನ್ಯಾಸಕ, ಕಮಲಾ ನೆಹರು ಕಾಲೇಜ್, ಶಿವಮೊಗ್ಗ ೫೭೭ ೨೦೧ **ಎ. ಪ್ರಭಾಕರ ಹೆಗ್ಡಾಳ್** ಅಮಲ ಇಂಡಸ್ಟ್ರೀಜ್, ಹೆನ್ನೂರು ರಸ್ತೆ, ಲಿಂಗರಾಜಪುರಂ, ಬೆಂಗಳೂರು ೫೬೦ ೦೮೪ **ಪ್ರಕಾಶ್ ಆರ್. ಕಮ್ಮಾರ** ನಂ. ೨೫/೧೦೫, ಸರಕಾರಿ ನೌಕರ ಭವನದ ಹತ್ತಿರ, ಸಾಗರ ೫೭೭ ೪೦೧ **ವಾಮನ ನಂದಾವರ** ದೃಶ್ಯ, ೫/೧೯೦, ಕೃಷ್ಣಾಪುರ, ಕಾಟಿಪಳ್ಳ ೫೭೪ ೧೪೯ **ಬೋರೇಗೌಡ ಚಿಕ್ಕಮರಳಿ** ಕನ್ನಡ ಉಪನ್ಯಾಸಕ, ಪ್ರ. ದ. ಕಾಲೇಜು, ಪಾಂಡವಪುರ ೫೭೧ ೪೩೪ **ಡಾ. ನಿಂಗಣ್ಣ ಸಣ್ಣಕ್ಕಿ** ನ್ಯೂ ಇಂಗ್ಲಿಷ್ ಸ್ಕೂಲ ಗೋಕಾಕ ೫೯೧ ೩೦೨

# ಸಂಕ್ರಮಣ ಪ್ರಕಾಶನ

## ಪುಸ್ತಕ ವಿತರಣ ಯೋಜನೆ: ಲಭ್ಯವಿರುವ ಕೃತಿಗಳು

### ಕಾವ್ಯ

| | | |
|---|---|---|
| ಮಗುವಿನ ಹಾಡು | ಬರಗೂರು ರಾಮಚಂದ್ರಪ್ಪ | ೬.೦೦ |
| ಮಹೂವಾ | ಬಂಜಗೆರೆ ಜಯಪ್ರಕಾಶ | ೧೦.೦೦ |
| ತಾಜಮಹಲಿನ ಹಾಡು | ಸುಕನ್ಯಾ ಮಾರುತಿ | ೧೦.೦೦ |
| ಏನಾದರೊಂದಾಗು | ಧರ್ಮದಾಸ ಬಾರ್ಕಿ | ೧೮.೦೦ |
| ಕಾವಳದ ಕವನಗಳು | ಧರ್ಮದಾಸ ಬಾರ್ಕಿ | ೧೬.೦೦ |
| ಮೊದಲ ಹೆಜ್ಜೆ | ಸಂಜೀವ ಕುಲಕರ್ಣಿ | ೨೦.೦೦ |
| ಇದಿಷ್ಟೇ ಸತ್ಯ | ರಾಮು ಜಾಧವ | ೧೦.೦೦ |
| ದೇಶ ಕೋಶ ದಾಸವಾಳ | ಮುಕುಂದರಾಜ ಎಲ್. ಎನ್. | ೩೦.೦೦ |
| ವಿಧಾನಸೌಧ | ಆರ್. ಮೋಹನ್ ನಾಗಮ್ಮನವರ | ೧೫.೦೦ |
| ನೆಲಕೊದ್ದು ಮುಗಿಲ ಜಿಗಿದರೆ | ಎಚ್. ಟಿ. ಬೋಳೆಗಾಂವಕರ | ೮.೦೦ |

### ಸಣ್ಣ ಕತೆ-ಕಾದಂಬರಿ

| | | |
|---|---|---|
| ಅದಮ್ಯ | ಜ. ಹೊ. ನಾರಾಯಣ ಸ್ವಾಮಿ | ೧೮.೦೦ |
| ಹನ್ನೊಂದು ಕಥೆಗಳು | ಕಮಲ ಹೆಮ್ಮಿಗೆ | ೨೫.೦೦ |
| ನ್ಯಾಯ | ಕೋರಗಲ್ ವಿರೂಪಾಕ್ಷಪ್ಪ | ೧೫.೦೦ |
| ಮಣ್ಣಿನ ಗುಣ | ಕೋರಗಲ್ ವಿರೂಪಾಕ್ಷಪ್ಪ | ೨೦.೦೦ |
| ಪ್ರೀತಿಗುಂಟು ರೀತಿ ನೀತಿ | ಶೇಖರ ಲದವಾ | ೧೫.೦೦ |

### ನಾಟಕ

| | | |
|---|---|---|
| ನರಬಲಿ | ಜ. ಹೊ. ನಾರಾಯಣ ಸ್ವಾಮಿ | ೧೫.೦೦ |
| ಮೈಕೆಲ್ ಎಂಜೆಲೊ | ಸದಾಶಿವ ಒಡೆಯರ | ೬.೦೦ |
| ನರಬಲಿ | ಬಸವರಾಜ ಸಬರದ | ೧೨.೦೦ |
| ಅಂಬು | ಚಂದ್ರಪ್ರಭ ಕಠಾರಿ | ೧೫.೨೦ |

### ಇತರ

| | | |
|---|---|---|
| ಉಲಿಯುವ ಅಲೆಗಳು (ಪ್ರಬಂಧಗಳು) | ಸದಾಶಿವ ಒಡೆಯರ | ೪೦.೦೦ |
| ಕರ್ನಾಟಕದಲ್ಲಿ ದಲಿತ ಚಳುವಳಿ ಮತ್ತು ಅಂಬೇಡ್ಕರ್: | ಗಂಗಾರಾಂ ಚಂಡಾಳ | ೩೫.೦೦ |
| ಹಿಂದೂ ಧರ್ಮ ಮತ್ತು ಹಿಂದೂ-ಮುಸಲ್ಮಾನ ಸಮಸ್ಯೆ | ಡಾ. ಲೋಹಿಯಾ | ೧೨.೦೦ |
| ರಾಷ್ಟ್ರೀಯ ಏಕತೆ | ಸಂ: ಸಿ. ಆರ್. ಭಟ್ಟ | ೫.೦೦ |
| ರಾಷ್ಟ್ರೀಯತೆ ಮತ್ತು ಮುಸ್ಲಿಮರು | ಫಕೀರ ಮು. ಕಟ್ಪಾಡಿ | ೧೫.೦೦ |